ಕನ್ನಡ ಪಠ್ಯಪುಸ್ತಕ ಪ್ರದೀಪಿಕೆ

# ಬಿರುಗಾಳಿ, ಕುಮಾರ ಸಂಭವ
# ಬಿಸಿಲು-ಬೆಳುದಿಂಗಳು

ಇವನ್ನು ಕುರಿತ ವಿಮರ್ಶಾತ್ಮಕ ಲೇಖನಗಳ ಸಂಕಲನ





ಲೇಖಕರು :
ಕೆ.ವೆಂಕಟರಾಮಪ್ಪ,ಎಂ.ಎ. ಎಂ.ವಿ.ಸೀತಾರಾಮಯ್ಯ,ಎಂ.ಎ.
ಜಿ. ವೆಂಕಟಸುಬ್ಬಯ್ಯ, ಎಂ.ಎ.,ಬಿ.ಟಿ.

ಬೆಲೆ : ಒಂದು ರೂಪಾಯಿ

ಕನ್ನಡ ಪಠ್ಯಪುಸ್ತಕ ಪ್ರದೀಪಿಕೆ

# ಬಿರುಗಾಳಿ, ಕುಮಾರಸಂಭವ
# ಬಿಸಿಲು-ಬೆಳುದಿಂಗಳು

(೧೯೫೭ರ ಇಂಟರ್‌ಮೀಡಿಯಟ್ ಪರೀಕ್ಷೆಯ ಪಠ್ಯಗ್ರಂಥಗಳ ಮೇಲಣ
ವಿಮರ್ಶಾತ್ಮಕ ಲೇಖನಗಳ ಸಂಕಲನ)



ಲೇಖಕರು :
ಕೆ. ವೆಂಕಟರಾಮಪ್ಪ, ಎಂ.ಎ.
ಎಂ. ವಿ. ಸೀತಾರಾಮಯ್ಯ, ಎಂ.ಎ.
ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.

ಇಂಟರ್‌ಮೀಡಿಯಟ್ ಕಾಲೇಜ್
ಕೋ-ಆಪರೇಟಿವ್ ಸೊಸೈಟಿ ಲಿಮಿಟೆಡ್
ಬೆಂಗಳೂರು-೧
೧೯೫೭

ಬೆಲೆ: ರೂ. ೧/-

# ಅರಿಕೆ

ನಗರದ ಪ್ರಮುಖ ದಿನ ಪತ್ರಿಕೆಯಾದ 'ಪ್ರಜಾವಾಣಿ'ಯ ಕೋರಿಕೆಯಂತೆ ಅದರಲ್ಲಿ ಪ್ರಕಟನೆಗಾಗಿ ಈ ಗ್ರಂಥದ ಲೇಖನಗಳನ್ನು ಸಿದ್ಧಗೊಳಿಸಲಾಯಿತು. ಆ ಪತ್ರಿಕೆಯ ಪ್ರೋತ್ಸಾಹದ ಪ್ರೇರಣೆಯಿಲ್ಲದೆ ಈ ಲೇಖನಗಳು ಬಹುಶಃ ರಚಿತವಾಗುತ್ತಿರಲಿಲ್ಲ. ಇವುಗಳನ್ನು ಗ್ರಂಥರೂಪದಲ್ಲಿ ಪ್ರಕಟಿಸಿದರೆ ಹೆಚ್ಚಿನ ಉಪಕಾರವಾಗುವುದೆಂದು ಕೆಲವು ವಿದ್ಯಾರ್ಥಿಗಳು ಸೂಚಿಸಿದರು. ಕೋರಿದ ಕೂಡಲೆ, ಕಾಲೇಜಿನ ಸಹಕಾರ ಸಂಘದ ಅಧಿಕಾರಿ ವರ್ಗದವರು ಪ್ರಕಾಶನ ಕಾರ್ಯಕ್ಕೆ ನೆರವು ನೀಡಿದರು. ಅತ್ಯಂತ ಅಲ್ಪ ಕಾಲಾವಕಾಶದಲ್ಲಿ ಶಾರದಾ ಮುದ್ರಣಾಲಯದವರು ಚೆನ್ನಾಗಿ ಅಚ್ಚುಮಾಡಿಕೊಟ್ಟರು. ಈ ಎಲ್ಲ ಉಪಕಾರಿಗಳಿಗೂ ಲೇಖಕರ ಕೃತಜ್ಞತೆ ಸಲ್ಲುತ್ತದೆ.

ವಿದ್ಯಾರ್ಥಿಗಳ ವ್ಯಾಸಂಗಕ್ಕೆ ಸಹಾಯ ಒದಗಿಸುವುದೇ ಲೇಖನಗಳ ಮುಖ್ಯ ಉದ್ದೇಶವಾದರೂ, ಗ್ರಂಥಗಳ ಸಾರ-ಸತ್ತ್ವ-ಸೌಂದರ್ಯಗಳನ್ನು ಪರಿಚಯ ಮಾಡಿಕೊಡಬೇಕೆಂಬುದೂ ಇನ್ನೊಂದು ಆಶಯ. ಅಲ್ಲದೆ, ವಿದ್ಯಾರ್ಥಿಗಳ ವಿಷಯ ಸಂಗ್ರಹಣ ಬುದ್ಧಿಯಲ್ಲದೆ ವಿಮರ್ಶನ ದೃಷ್ಟಿ ಬೆಳೆಯಲು ಮಾರ್ಗದರ್ಶನವಾಗಬೇಕೆಂದೂ ಮತ್ತೊಂದು ಬಯಕೆ. ಆದ್ದರಿಂದ, ಕೇವಲ ಪ್ರಸಕ್ತ ವರ್ಷದ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಈ ಗ್ರಂಥಗಳನ್ನು ರಸಾಸ್ವಾದನ ದೃಷ್ಟಿಯಿಂದ ವ್ಯಾಸಂಗ ಮಾಡಬಯಸುವ ಇತರರಿಗೂ ಕೆಲಮಟ್ಟಿಗಾದರೂ ಈ ಲೇಖನಾವಳಿಯಿಂದ ಪ್ರಯೋಜನವಾಗಬಹುದೆಂದು ಲೇಖಕರು ಭಾವಿಸಿದ್ದಾರೆ.

ಪತ್ರಿಕೆಯಲ್ಲಿ ಪ್ರಕಟವಾದ ಲೇಖನಗಳನ್ನು ಉಚಿತ ಕಂಡಂತೆ ಅಲ್ಲಲ್ಲಿ ತಿದ್ದಲಾಗಿದೆ; ಸಣ್ಣಪುಟ್ಟ ಅಂಶಗಳನ್ನು ಸೇರಿಸಿದೆ. ಪತ್ರಿಕೆಯಲ್ಲಿಯೂ, ಇಲ್ಲಿಯೂ, ಇನ್ನೂ ವಿಸ್ತಾರವಾದ ವಿಮರ್ಶೆಗೆ ಕಾಲಾವಕಾಶ ಹಾಗೂ ಸ್ಥಳಾವಕಾಶ ಆಗಲಿಲ್ಲವೆಂಬುದೇ ಲೇಖಕರ ಮನಸ್ಸಿನ ಕೊರತೆ. ಇನ್ನೆರಡು ಪಠ್ಯಗ್ರಂಥಗಳ ಅವಲೋಕನ ಇಲ್ಲಿ ಸೇರ್ಪಡೆಯಾಗದಿರುವುದಕ್ಕೂ ಅದೇ ಮುಖ್ಯ ಕಾರಣ.

ಎಂ. ವಿ. ಸೀತಾರಾಮಯ್ಯ
ಸಂಪಾದಕ

೪ಂನೆಯ ಪುಟದ ಕಡೆಯ ವಾಕ್ಯವೃಂದ ರವೀಂದ್ರರ ಲೇಖನವೊಂದರಿಂದ ಉದ್ಧೃತವಾದುದು. ಉದ್ಧರಣ ಚಿಹ್ನೆಗಳು ಬಿಟ್ಟುಹೋಗಿವೆ.

## ವಿಷಯ ಸೂಚಿಕೆ



# ಬಿರುಗಾಳಿ

ಲೇಖಕ: ಕೆ. ವೆಂಕಟರಾಮಪ್ಪ, ಎಂ.ಎ.

---

೧

## ಮೊದಲ ಮಾತು

ಷೇಕ್ಸ್‌ಪಿಯರ್ ಮಹಾಕವಿಯು ತನ್ನ ಪರಿಣತ ವಯಸ್ಸಿನಲ್ಲಿ ಬರೆದ ನಾಟಕ 'ಟೆಂಪೆಸ್ಟ್'. ಅದರಲ್ಲಿ ಆತನ ಪರಿಪಕ್ವಾನುಭವ ವೇದ್ಯವಾಗುತ್ತದೆ. ಜೀವನದ ಕಷ್ಟಸುಖಗಳನ್ನೆಲ್ಲ ಕಂಡುಂಡು ಬಾಳಿನ ತತ್ವವನ್ನು ಮನಗಂಡ ಪ್ರಭಾವ ಶಾಲಿಯಾದ ಮಹಾಕವಿ ಈ ರೂಪಕದಲ್ಲಿ ಅದನ್ನು ಲೋಕಮೋಹಕವಾದ ರೀತಿ ಯಲ್ಲಿ ನಿರೂಪಿಸಿದ್ದಾನೆ.

"ವೈರ, ವೈರಕ್ಕೆ ಮದ್ದಲ್ಲ; ಸೇಡು ಸೇಡನ್ನೇ ಹೆರುತ್ತದೆ; ಪ್ರೇಮ, ಔದಾರ್ಯ, ಕ್ಷಮೆ, ಸಹನೆ ಮಾನವನನ್ನು ಪುನೀತಗೊಳಿಸುವ, ಭೂಮಿಗೆ ನಾಕವ ನ್ನೆಳೆದು ತರುವ, ದೈವೀಗುಣಗಳು; ಇವೆಲ್ಲ ಪೂಜೆ ಪ್ರಾರ್ಥನೆ ಧ್ಯಾನ ತಪಸ್ಸು ಗಳಿಂದ ಮಾತ್ರ ಒದಗುವಂಥವು ಎಂಬಿವೇ ವಿಶ್ವತತ್ವಗಳು ಈ ನಾಟಕದಲ್ಲಿ ಪ್ರತಿಮಿತವಾಗಿವೆ."

ಇಂಥ ಉದಾತ್ತ ತತ್ವನಿರೂಪಣೆಯಿಂದ ಕೂಡಿರುವ ಈ ನಾಟಕ ಬಹಳ ಕಲಾತ್ಮಕವಾಗಿಯೂ ಇದ್ದು ಲೋಕಮೋಹಕವಾಗಿದೆ. ಇಂಥಾ ಸುಂದರ ರೂಪಕ ವನ್ನು ಪ್ರತಿಭಾಶಾಲಿಗಳಾದ ಕವಿ ಕುವೆಂಪುರವರು ಓದಿ ಮೆಚ್ಚಿ, ಅದನ್ನು ಕನ್ನಡಕ್ಕೆ ತರಲು ಸಂಕಲ್ಪಿಸಿದ್ದು ಸಹಜವೇ ಆಗಿದೆ. ಆ ಪ್ರಯತ್ನವೇ ಕವಿ ಕುವೆಂಪುರವರ 'ಬಿರುಗಾಳಿ.' ಇದು ಇಂಗ್ಲಿಷ್ ನಾಟಕದ ಅನುವಾದವೇ ಆದರೂ ಅನೇಕ ಪ್ರಸಂಗಗಳಲ್ಲಿ ಕವಿಯ ಸ್ವಂತ ಕಲ್ಪನೆ ಎದ್ದು ಕಾಣುತ್ತದೆ. ಒಂದೆರಡು ದೃಶ್ಯ ಗಳು ಬಹಳ ಬದಲಾಗಿವೆ.

ಇಂಗ್ಲಿಷ್ ಬಾರದ ಅಚ್ಚಕನ್ನಡ ಓದುಗರಿಗೆ ಇದು ಸ್ವತಂತ್ರ ಕೃತಿಯೆಂದೇ ತೋರಿದರೆ ಆಶ್ಚರ್ಯವೇನೂ ಇಲ್ಲ. ಮೂಲಕೃತಿಯನ್ನು ಮರೆಸಿ ಅದರ ಗುಣಾತಿಶಯಗಳನ್ನು ಮೆರೆಸುವ ಇಂಥಾ ಅನುವಾದ, ಅನುವಾದಕರ ಜಾತಿಗೇ

ಬಂದ ಒಂದು ಅಪಖ್ಯಾತಿಯನ್ನು ಹೋಗಲಾಡಿಸುತ್ತದೆ. ಪ್ರತಿಭಾಯುತನಾ ಕವಿಶ್ರೇಷ್ಠನು ಅನುವಾದ ಕಾರ್ಯವನ್ನು ಕೈಕೊಂಡಾಗ ಅದು ಎಷ್ಟು ಉತ್ತಮವಾ ನಡೆಯುವುದೆಂಬುದಕ್ಕೆ ಕುವೆಂಪು ಅವರ 'ಬಿರುಗಾಳಿ' ಉತ್ತಮ ದೃಷ್ಟಾಂ ವಾಗಿದೆ.

## ೨

## ಮೂಲಕಥೆ

'ಬಿರುಗಾಳಿ'ಗೆ ಮೂಲ ಕೃತಿಯಾದ ಟೆಂಪೆಸ್ಟ್ ನಾಟಕ ಮಿಲಾನ್ ನಗರದ ಶ್ರೀಮಂತ ಪ್ರಾಸ್ಪೆರೋ (Prospero) ವಿನ ಬದುಕಿನ ಒಂದು ಚಿತ್ರ ಅವನು ದ್ರೋಹಿಯಾದ ತಮ್ಮನ ಮಸಲತ್ತಿಗೆ ಬಲಿಬಿದ್ದು ರಾಜ್ಯಭ್ರಷ್ಟನಾಗಿ ತನ್ನ ಚಿಕ್ಕ ಹಸುಳೆಯಾದ ಹೆಣ್ಣುಕೂಸಿನೊಡಗೂಡಿ ಒಂದು ನಿರ್ಜನ ದ್ವೀಪ ಸೇರಿ ಏಕಾಂತವಾಸ ಮಾಡುತ್ತಿರುತ್ತಾನೆ. ಅವನ ಆಪ್ತ ಸರದಾರನೊಬ್ಬ ಇವನು ರಾಜ್ಯಭ್ರಷ್ಟನಾಗಿ ಹೊರಟಾಗ ಕೊಂಚ ಆಹಾರ ಸಾಮಗ್ರಿ, ಬಟ್ಟೆಬರೆ, ಎಲ್ಲಕ್ಕಿಂತ ಮಿಗಿಲಾಗಿ ಆತನಿಗೆ ಅತ್ಯಂತ ಪ್ರಿಯವಾದ ಕೆಲವು ಮಂತ್ರಶಾಸ್ತ್ರ ಗ್ರಂಥಗಳು, ಇವಿಷ್ಟನ್ನೂ ಆತನ ದೋಣಿಯಲ್ಲಿ ರಹಸ್ಯವಾಗಿ ಇರಿಸಿದ್ದನು. ಇವಿಲ್ಲದಿದ್ದರೆ ಪ್ರಾಸ್ಪೆರೋವಿನ ಗತಿ ಏನಾಗುತ್ತಿತ್ತೊ! ಪ್ರಾಸ್ಪೆರೋ ಮಂತ್ರಶಾಸ್ತ್ರದಲ್ಲಿ ಬಹು ಪರಿಶ್ರಮಹೊಂದಿದ್ದನು. ಆತನು ಆ ಶಾಸ್ತ್ರ ಸಹಾಯದಿಂದ ಆ ನಿರ್ಜನವಾದ ಚಿಕ್ಕ ದ್ವೀಪದಲ್ಲಿ ಮಂತ್ರಗಾತಿಯೊಬ್ಬಳ ಕಾಟಕ್ಕೆ ಸಿಕ್ಕಿ ನರಳುತ್ತಿದ್ದ, 'ಏರಿಯಲ್' ಮೊದಲಾದ ಕೆಲವು ಶಕ್ತಿಗಳನ್ನು ಬಿಡುಗಡೆಮಾಡಿ, ಅವುಗಳ ಸಹಾಯದಿಂದ ಹೇಗೋ ಜೀವನ ನಿರ್ವಾಹ ಮಾಡುತ್ತ ತನ್ನ ಹೆಣ್ಣುಮಗಳನ್ನು ಎಚ್ಚರಿಕೆಯಿಂದ ಸಲಹಿ ಅವಳಿಗೆ ವಿದ್ಯಾಸಂಸ್ಕಾರಗಳನ್ನು ನೀಡುತ್ತ ಹನ್ನೆರಡು ವರ್ಷಗಳ ಕಾಲ ತಳ್ಳಿದನು. ಅವನ ಮಗಳು 'ಮಿರಾಂಡ' (Miranda) ತಂದೆಯ ಪ್ರೇಮಾದರ ಗಳಲ್ಲಿ ಬೆಳೆದು ಸುಂದರ ಯುವತಿಯಾದಳು. ಅವಳಿಗೆ ತನ್ನ ತಂದೆಯಿಲ್ಲದೆ ಬೇರೆ ಪುರುಷರ ಪರಿಚಯವಿರಲಿಲ್ಲ; ಬೇರೆ ಮಾನವ ಸ್ತ್ರೀಯರ ಪರಿಚಯವಂತೂ ಇರಲೇ ಇಲ್ಲ. ತಂದೆಯೇ ಅವಳ ಸಮಸ್ತ ಬಾಂಧವವರ್ಗ. ಪ್ರಾಸ್ಪೆರೋವಿಗೆ ಸಹಜವಾಗಿ ತನ್ನ ಮುದ್ದುಮಗಳ ಭವಿಷ್ಯತ್ತಿನ ಚಿಂತೆ. ಆ ನಿರ್ಜನ ದ್ವೀಪದಲ್ಲಿ ಅವಳಿಗೆ ತಕ್ಕ ವರನು ದೊರೆಯುವ ಬಗೆ ಹೇಗೆ? ತನ್ನ ಅನಂತರ ಅವಳ ಗತಿ ಏನಾಗಬೇಕು? ಈ ಯೋಚನೆಗಳು ಅವನನ್ನು ಪೀಡಿಸುತ್ತಿರುತ್ತವೆ.

ಹೀಗಿರುವಾಗ ಒಂದು ದಿನ ತಂದೆ, ಮಗಳು ಸಮುದ್ರ ತೀರದಲ್ಲಿ ನಿಂತು

ನೋಡುತ್ತಿರುವಾಗ ದೂರದಲ್ಲಿ ಒಂದು ವಿಹಾರ ನೌಕೆ ಕಾಣಿಸುತ್ತದೆ. ಅದರಲ್ಲಿ ತನ್ನ ಪರಮ ವೈರಿಯಾದ ತಮ್ಮ, ಅವನ ದ್ರೋಹಕಾರ್ಯಕ್ಕೆ ನೆರವು ನೀಡಿದ ನೇಪಲ್ಸ್ ನಗರದ ದೊರೆ, ಅವನ ಮಗ, ಪರಿವಾರ ಎಲ್ಲರೂ ಇರುವುದನ್ನು ಕಂಡು ಪ್ರಾಸ್ಪೆರೋ ತನ್ನ 'ಸೇಡಿನ ಸಾಧನೆ'ಗೆ ಇದು ತಕ್ಕ ಸಮಯವೆಂದು ಬಗೆಯುತ್ತಾನೆ. ಆದರೆ ಉತ್ತರ ಕ್ಷಣದಲ್ಲಿಯೇ ಇದು ಕೀಳು ಯೋಚನೆಯೆಂದು ಹೊಳೆದು, ಆ ಉದಾತ್ತ ಜೀವಿಯು ತನ್ನ ಆಪ್ತಸೇವಕನಾದ ಏರಿಯಲ್‌ನ ಸಹಾಯದಿಂದ ಆ ದೋಣಿಯನ್ನು ಮುಳುಗಿಸಿದ ಹಾಗೆ ಮಾಡಿ ಅದರೊಳಗೆ ಇದ್ದವರನ್ನೆಲ್ಲ ದ್ವೀಪದ ಬೇರೆ ಬೇರೆ ಕಡೆ ಸೇರುವ ಹಾಗೆ ಮಾಡುತ್ತಾನೆ. ಅವರು ಒಬ್ಬೊಬ್ಬರೂ ಉಳಿದವರೆಲ್ಲಾ ಸತ್ತರೆಂದೇ ಬಗೆದು ದುಃಖಿಸುತ್ತಿರುತ್ತಾರೆ. ಆಗ ನೇಪಲ್ಸಿನ ಯುವರಾಜ ಫರ್ಡಿನಾಂಡ್‌ನನ್ನು ಬರಮಾಡಿ ಅವನಿಗೂ, ಮಿರಾಂಡಳಿಗೂ ಒಲವುಂಟಾಗಲು ಅವರ ವಿವಾಹ ಮಾಡಿಸಿ ಕೊನೆಗೆ ಆ ನೌಕೆಯವರನ್ನೆಲ್ಲ ಒಟ್ಟುಗೂಡಿಸಿ ತನ್ನ ತಮ್ಮನ ಅನ್ಯಾಯವರ್ತನೆಯನ್ನು ಮನ್ನಿಸುತ್ತಾನೆ—ಇದೇ ಟೆಂಪೆಸ್ಟ್ ನಾಟಕದ ಕಥೆಯ ತಿರುಳು. ಇದನ್ನು ಶ್ರೀ ಕುವೆಂಪುರವರು ಕನ್ನಡಕ್ಕೆ ಬಹಳ ಸುಂದರವಾಗಿ ಅನುವಾದ ಮಾಡಿದಾರೆ.

ಇಲ್ಲಿ ಇಂಗ್ಲಿಷ್ ಹೆಸರುಗಳನ್ನೆಲ್ಲ ಕೈಬಿಟ್ಟು ಕನ್ನಡದ ಹೆಸರುಗಳನ್ನು ಅಳವಡಿಸಲಾಗಿದೆ. ಮಿಲಾನ್ ನಗರದ ಪ್ರಾಸ್ಪೆರೋ ಇಲ್ಲಿ ಕೆಳದಿಯ ಭೈರವನಾಯಕನಾಗಿದ್ದಾನೆ. ಮಿರಾಂಡ ಗೌರಾಂಬೆಯಾಗಿದ್ದಾಳೆ. ಸಮುದ್ರ ಮಧ್ಯದ ದ್ವೀಪದ ಬದಲು ಕನ್ನಡನಾಡಿನ ಸಹ್ಯಾದ್ರಿಯಲ್ಲಿ ಹುಟ್ಟಿ ಹರಿದ ಒಂದು ನದಿಯ ಮಧ್ಯದ ಒಂದು ಚಿಕ್ಕ ದ್ವೀಪ ಬಂದಿದೆ. ಏರಿಯಲ್ ಇಲ್ಲಿ ಕಿನ್ನರನಾಗಿದ್ದಾನೆ. ಹೀಗೆಯೇ ಉಳಿದ ಪಾತ್ರಗಳಿಗೂ ಕನ್ನಡದ ಹೆಸರುಗಳನ್ನಿಟ್ಟು ನಾಟಕ ವಸ್ತುವನ್ನು ಕನ್ನಡದಲ್ಲಿ ನಾಟಿದ್ದಾರೆ.

೨

## ಕಥಾ ವಿನ್ಯಾಸ

### ದೋಣಿಯ ಅಪಘಾತ (ದೃಶ್ಯ ೧)

'ಬಿರುಗಾಳಿ' ಒಂಬತ್ತು ದೃಶ್ಯಗಳ ಒಂದು ರಮ್ಯ ರೂಪಕ. ನಾಟಕಕ್ಕೆ ಹೆಸರು ಕೊಟ್ಟಿರುವ ಬಿರುಗಾಳಿಯು ಮೊದಲೇ ಬೀಸಿಹೋಗಿರುತ್ತದೆ. ಅದರ ಪರಿಣಾಮವನ್ನು ಮೊದಲ ದೃಶ್ಯದಲ್ಲಿ ಕಾಣತೊಡಗುತ್ತೇವೆ. ಕೆಳದಿಯಿಂದ

ಹೊರಟ ವಿಹಾರ ನೌಕೆಯಲ್ಲಿದ್ದವರೆಲ್ಲ ನದಿಯಲ್ಲಿ ಮುಳುಗಲು ಅವರ ಪರಿವಾರಕ್ಕೆ ಸೇರಿದ ತ್ರಿಶಂಕು ಬೀಮಣರೆಂಬಿಬ್ಬರು ನಮಗೆ ಮೊದಲ ದೃಶ್ಯದಲ್ಲಿ ಕಾಣಿಸುತ್ತಾರೆ. ತ್ರಿಶಂಕು ದೋಣಿ ಮುಳುಗಿದ ಮೇಲೆ ತಾನು ಹೇಗೆ ಬದುಕಿದನೆಂಬುದು ತಿಳಿಯದೆ ತಾನು ಬದುಕಿರುವೆನೋ ಸತ್ತಿರುವೆನೋ ಎಂದು ಯೋಚಿಸುತ್ತ, ಚಳಿಗೆ ನಡುಗಿ ಹಸಿವೆಯಿಂದ ಗೋಳಿಡುತ್ತ ಬಾಣಸಿಗ ಬೀಮಣನನ್ನು ಸ್ಮರಿಸಿ ಚೀರಿಡುತ್ತಾನೆ. ಆ ಘಳಿಗೆಯಲ್ಲಿ ಅವನಿಗೆ ಬೀಮಣ ಕಾಣದಿದ್ದರೂ ಅವನ ಧ್ವನಿ ಕೇಳುತ್ತದೆ. ಬೀಮಣ ತ್ರಿಶಂಕುವಿನಂತೆಯೇ ತಾನೊಬ್ಬನೇ ಬದುಕಿದವನೆಂಬ ಭ್ರಾಂತಿಯಲ್ಲಿರುತ್ತಾನೆ; ಚಳಿ ಮಳೆ ಗಾಳಿಗಳಿಗೆ ಸಿಕ್ಕಿ ಗಾಬರಿಯಾಗಿದ್ದಾನೆ. ಆದರೆ ಅವನು ಆಶಾವಾದಿ. ದ್ವೀಪದಲ್ಲಿ ಅವನಿಗೆ ಅದು ಹೇಗೋ ದೊರೆತ ಹೆಂಡವನ್ನು ಸವಿದುನೋಡಿ ಒಂದು ಬುರುಡೆಯನ್ನುಕೈಲಿ ಹಿಡಿದು ಬರುತ್ತಿರುತ್ತಾನೆ. ಆ ಸಮಯದಲ್ಲಿ ಅವನಿಗೆ ತ್ರಿಶಂಕುವಿನ ಧ್ವನಿ ಕೇಳಿಸಿ ಕೊಂಚ ಗಾಬರಿಯಾಗುತ್ತದೆ. ಅದೇನು ತ್ರಿಶಂಕುವಿನ ಧ್ವನಿಯೇ ಅಥವಾ ಅವನ ಪ್ರೇತದ ಧ್ವನಿಯೇ ಎಂಬ ಸಂಶಯ ಹುಟ್ಟುತ್ತದೆ. ಕೊನೆಗೆ ಇಬ್ಬರೂ ಭೇಟಿಯಾಗಿ ತಾವು ಸತ್ತಿಲ್ಲವೆಂದೂ ನಿಜವಾಗಿಯೂ ಬದುಕಿಯೇ ಇರುವೆವೆಂದೂ ಖಚಿತ ಮಾಡಿಕೊಂಡು ಮದ್ಯಪಾನದಿಂದ ಕೊಂಚ ಚೇತನಗೊಂಡು ತಮ್ಮೊಡನೆ ದೋಣಿಯಲ್ಲಿ ಬಂದ ರಣನಾಯಕ, ಶಿವನಾಯಕ, ರುದ್ರನಾಯಕ ಮುಂತಾದವರೇನಾದರೋ ನೋಡಬೇಕೆಂದು ತೀರ್ಮಾನಿಸಿ ದ್ವೀಪದಲ್ಲೆಲ್ಲ ಸುತ್ತಿ ನೋಡುವ ನಿರ್ಣಯ ಮಾಡಿ ಹೊರಡುತ್ತಾರೆ. ಇಲ್ಲಿಗೆ ಮೊದಲ ದೃಶ್ಯ ಮುಗಿಯುತ್ತದೆ.

**ಸಂಚು (ದೃಶ್ಯ ೨)**

ಎರಡನೆಯ ದೃಶ್ಯದಲ್ಲಿ ಭೈರವನಾಯಕ, ತನ್ನ ಮಗಳು ಗೌರಾಂಬೆಯೊಡನೆ ಪ್ರವೇಶಿಸುತ್ತಾನೆ. ತಾನು ನೋಡನೋಡುತ್ತಿದ್ದ ಹಾಗೆಯೇ ದೋಣಿ ಬಿರುಗಾಳಿಯಲ್ಲಿ ಮುಳುಗಿಹೋದುದನ್ನು ಕಂಡು ಆ ಹೂವೆದೆಯ ಹುಡುಗಿಗೆ ಬಹಳ ಮರುಕವಾಗಿದೆ. ಆ ಕಿರುದೋಣಿ ಮುಳುಗುವಾಗ ಅದರಲ್ಲಿದ್ದ ಜೀವಿಗಳು ಭೀತಿ ನಿರಾಶೆಗಳಿಂದ ಕಂಗೆಟ್ಟು 'ಹೋ' ಎಂದು ಚೀರಿಕೊಂಡಿದ್ದನ್ನು ಕೇಳಿ ಅವಳ ಕೋಮಲ ಹೃದಯ ತಲ್ಲಣಗೊಂಡಿದೆ "ಪುಣ್ಯಾತ್ಮರೊಬ್ಬರೂ ಇರಲಿಲ್ಲವೆ ಅಲ್ಲಿ ?" ಎಂದು ಅವಳು ತನ್ನ ತಂದೆಯನ್ನು ಪ್ರಶ್ನಿಸಿ ತನಗೇನಾದರೂ ಮಂತ್ರ ಶಕ್ತಿಯಿದ್ದಿದ್ದರೆ ಬಿರುಗಾಳಿಯನ್ನು ಅಡಗಿಸಿ ದೋಣಿಯನ್ನು ಉಳಿಸುತ್ತಿದ್ದೆನೆಂದು ಹೇಳುತ್ತಾಳೆ.

ಅವಳ ಪೇಚಾಟವನ್ನು ಕಂಡು ಕನಿಕರದಿಂದ ಭೈರವನಾಯಕನು ಅವಳಿಗೆ ಸಮಾಧಾನ ಹೇಳುತ್ತಾನೆ. ತಾನೇ ಉದ್ದೇಶಪೂರ್ವಕವಾಗಿ ಆ ಬಿರುಗಾಳಿಯನ್ನೆಬ್ಬಿಸಿದನೆಂದೂ, ದೋಣಿ ನಿಜವಾಗಿ ಮುಳುಗಿ ಹೋಗಲಿಲ್ಲವೆಂದೂ ಅದರಲ್ಲಿದ್ದವರೆಲ್ಲ ಸುರಕ್ಷಿತವಾಗಿ ದ್ವೀಪ ಸೇರಿದ್ದಾರೆಂದೂ ಇದನ್ನೆಲ್ಲ ಅವಳಿಗಾಗಿಯೇ ಮಾಡಿದನೆಂದೂ, ಹೇಳುತ್ತಾನೆ. ಅಷ್ಟೇ ಅಲ್ಲದೆ ಭೈರವನು ಆಗ ತನ್ನ ಹಿಂದಿನ ವೃತ್ತಾಂತವನ್ನೆಲ್ಲಾ ಮಗಳಿಗೆ ಹೇಳುತ್ತಾನೆ.

ಹನ್ನೆರಡು ವರ್ಷಗಳ ಹಿಂದೆ ತಾನು ಕೆಳದಿಯ ಅರಸನಾಗಿದ್ದುದು, ಅವನ ತಮ್ಮ ದ್ರೋಹಚಿಂತಕನಾಗಿ ನೆರೆಯ ಸಂಸ್ಥಾನವಾದ ನಗರರಾಜ್ಯದ ಅರಸ ರಣನಾಯಕನೊಡನೆ ಮಸಲತ್ತು ಮಾಡಿ ತನ್ನನ್ನು ಸೆರೆ ಹಿಡಿದು ದೋಣಿಯೊಂದರಲ್ಲಿ ಕೂಡಿಸಿ ಹೊಳೆಯಲ್ಲಿ ತೇಲಿಬಿಟ್ಟದ್ದು, ಆಮೇಲೆ ಆ ನಿರ್ಜನ ದ್ವೀಪವನ್ನು ಸೇರಿ ಅಲ್ಲಿದ್ದ ಒಂದೇ ಒಂದು ಗುಹೆಯನ್ನು ಆಕ್ರಮಿಸಿಕೊಂಡು ತಾನು ಕಾಲಕ್ಷೇಪ ಮಾಡಿದ್ದು, ಈಗ ತನ್ನ ವೈರಿಗಳೆಲ್ಲ ಆ ದೋಣಿಯಲ್ಲಿ ಕುಳಿತು ವಿಹಾರಕ್ಕೆಂದು ನದಿಯಲ್ಲಿ ಬರುತ್ತಿದ್ದುದನ್ನು ಕಂಡು ಈ ಬಿರುಗಾಳಿಯನ್ನೆಬ್ಬಿಸಿದ್ದು—ಈ ಕಥೆಯನ್ನೆಲ್ಲ ಮಗಳಿಗೆ ಹೇಳುತ್ತಾನೆ. ಇಷ್ಟು ಹೇಳುವ ಹೊತ್ತಿಗೆ ಭೈರವನಾಯಕನ ಅತಿಮಾನುಷ ಸೇವಕ-ಭಕ್ತನಾದ ಕಿನ್ನರನು ಕಾಣಿಸಿಕೊಳ್ಳಲು ನಾಯಕನು ಕತೆ ನಿಲ್ಲಿಸಿ, ಮಗಳನ್ನು ನಿದ್ದೆಮಾಡಿಸಿ ಕಿನ್ನರನೊಡನೆ ಸಂಭಾಷಣೆಗೆ ತೊಡಗುತ್ತಾನೆ. ಕಿನ್ನರನು ತನ್ನ ಒಡೆಯನ ಆಜ್ಞೆಗಳನ್ನೆಲ್ಲ ಯಥಾವತ್ತಾಗಿ ನೆರವೇರಿಸಿ ದೋಣಿಯಲ್ಲಿದ್ದವರನ್ನೆಲ್ಲ ಜೀವಸಹಿತವಾಗಿ ದಡ ಹತ್ತಿಸಿದ ಸುದ್ದಿ ಹೇಳುತ್ತಾನೆ. ನಾಯಕನು ಕಿನ್ನರನ ಕಾರ್ಯಸಾಧನೆಯನ್ನು ಮೆಚ್ಚಿ ಅವನ ಸೇವಾ ದಕ್ಷತೆಯನ್ನು ಹೊಗಳಿ ಅವನು ಮುಂದೆ ಮಾಡಬೇಕಾಗಿರುವ ಕರ್ತವ್ಯವನ್ನು ಸೂಚಿಸಿ ಕಳುಹಿಸುತ್ತಾನೆ.

## ಪ್ರಣಯ

ಕಿನ್ನರನು ಹೊರಟುಹೋದ ಮೇಲೆ ನಾಯಕನು ನಿದ್ದೆಯಲ್ಲಿದ್ದ ಮಗಳನ್ನೆಚ್ಚರಿಸಿ ಮನೆಗೆ ಕರೆದೊಯ್ಯುತ್ತಾನೆ. ಅಲ್ಲಿ ಶನಿಯನೆಂಬ ಅವನ ಅರ್ಧಮಾನುಷನಾದ ಸೇವಕನಿರುತ್ತಾನೆ. ಅವನೊಡನೆ ಮಾತನಾಡುತ್ತಿರುವಾಗ, ಅತ್ತ ಕಿನ್ನರನು ಮಧುರವಾಗಿ ಹಾಡುತ್ತ ದ್ವೀಪದ ತೀರದಲ್ಲೊಂದು ಕಡೆ ಮರುಗುತ್ತ ಕುಳಿತಿದ್ದ ಶಿವನಾಯಕನಿಗೆ (ನಗರ ಸಂಸ್ಥಾನದ ಯುವರಾಜ) ತನ್ನ ಹಾಡಿನಿಂದ ಉತ್ಸಾಹ ತುಂಬಿ, ತಾನು ಅದೃಶ್ಯನಾಗಿಯೇ ಉಳಿದು ಉಪಾಯ

ವಾಗಿ ಅವನನ್ನು ಭೈರವ ನಾಯಕನ ಗುಹೆಯ ಬಳಿಗೆ ಕರೆತರುತ್ತಾನೆ. ಅಲ್ಲಿ ಗೌರಾಂಬೆಯು ಅವನನ್ನು ಕಂಡು ಮೋಹಿಸುತ್ತಾಳೆ.

ಯುವರಾಜ ಶಿವನಾಯಕನೂ ಆ ನಿರ್ಜನ ದ್ವೀಪದಲ್ಲಿ ಈ ಅನುಪಮ ಸುಂದರಿಯನ್ನು ಕಂಡು ಬೆರಗಾಗಿಹೋಗುತ್ತಾನೆ. ಮೊದಲ ದರ್ಶನದಲ್ಲಿಯೇ ಅವರಿಬ್ಬರಿಗೂ ಪ್ರೇಮ ಮೂಡುತ್ತದೆ. "ಕಣ್ಣು ಕೂಡುವ ಮುನ್ನಮೆದೆಯೆರಡು ಕೂಡಿದವು." ಇದನ್ನು ಕಂಡ ಭೈರವನಾಯಕನಿಗೆ ಸಂತೋಷವೇ ಆಯಿತಾದರೂ "ಸುಲಭದೊಳೆ ದೊರೆತುದಕೆ ಬೆಲೆಯಿರದು" ಎಂಬ ಲೋಕಾನುಭವವುಳ್ಳವ ನಾದ್ದರಿಂದ ಶಿವನಾಯಕನನ್ನು ಪರೀಕ್ಷಿಸಲು ಸಂಕಲ್ಪಿಸಿ ಶನಿಯನು ಹೊರುತ್ತಿದ್ದ ಮರದ ತುಂಡುಗಳನ್ನು ಹೊರುವ ಕೆಲಸವನ್ನು ಅವನಿಗೆ ನಿಯಮಿಸುವನು. ಶಿವನಾಯಕನೇನು ಸುಲಭವಾಗಿ ಇದಕ್ಕೆ ಒಪ್ಪಲಿಲ್ಲ. ಭೈರವನು ತನ್ನ ಅಮಿತವಾದ ಮಂತ್ರ ಬಲವನ್ನು ಪ್ರದರ್ಶಿಸಿ ಅವನನ್ನು ಕೈವಶಮಾಡಿಕೊಳ್ಳಬೇಕಾಯಿತು. ಗೌರಾಂಬೆಗೆ ತನ್ನ ತಂದೆಯ ಈ ಕ್ರೂರವರ್ತನೆಯು ಅರ್ಥವಾಗದೆ ತನ್ನ ಹೊಸ ಇನಿಯನ ಪರವಾಗಿ ತಂದೆಯ ಸಂಗಡ ವಾದಿಸುವಳು. ಭೈರವನಾಯಕನು ಅದಕ್ಕೆ ಮನಸ್ಸು ಕೊಡದೆ ಶಿವನಾಯಕನನ್ನು ಕಟ್ಟುನಿಟ್ಟಾಗಿ ಕೆಲಸಕ್ಕೆ ನಿಯಮಿಸಿ ತಾನು ಅದೃಶ್ಯನಾಗಿ ನಿಂತು ತನ್ನ ಮಗಳ ಒಲವಿನ ಬೆಳವಣಿಗೆಯನ್ನು ಗಮನಿಸು ತ್ತಿರುವನು ಗೌರಾಂಬೆ-ಶಿವನಾಯಕರ ಈ ಪ್ರಣಯಕಥೆ ಬಹಳ ರಮ್ಯವಾಗಿ ಬೆಳೆಯುತ್ತದೆ. ಬೇರೆ ಗಂಡಸನ್ನೇ ಕಂಡರಿಯದ ಮುಗ್ಧ ಯುವತಿ, ನಾಗರಿಕ ಜೀವನವನ್ನು ಕಂಡ ಯುವರಾಜ-ಇವರ ಪ್ರೇಮಕಥೆ ನಮಗೆ ಸಂಸ್ಕೃತದ ಶಕುಂತಲಾ-ದುಷ್ಯಂತರ ಪ್ರೇಮ ಕಥೆಯ ನೆನಪನ್ನುಂಟುಮಾಡುತ್ತದೆ.

**ವಂಚನೆ (ದೃಶ್ಯ ೩)**

ಮೂರನೆಯ ದೃಶ್ಯದಲ್ಲಿ ನಾವು ನಗರ ಸಂಸ್ಥಾನದ ಅರಸು, ರಣನಾಯಕ, ಅವನ ತಮ್ಮ ರಂಗನಾಯಕ, ಕೆಳದಿಯ ರುದ್ರನಾಯಕ ಮತ್ತು ವೃದ್ಧಮಂತ್ರಿ ಜಯದೇವ—ಇವರೆಲ್ಲ ಒಟ್ಟಾಗಿ ಕಲೆತು ತಮ್ಮ ಸುಖದುಃಖಗಳ ಸಮಾಲೋಚನೆ ಯಲ್ಲಿರುವುದನ್ನು ಕಾಣುತ್ತೇವೆ. ಅವರು ಯುವರಾಜನಾದ ಶಿವನಾಯಕನು ನೀರಲ್ಲಿ ಮುಳುಗಿ ಸತ್ತನೆಂದೇ ನಂಬಿ ದುಃಖಿಸುತ್ತಿರುತ್ತಾರೆ. ರಣನಾಯಕನಂತೂ ಯಾರ ಸಮಾಧಾನದ ಮಾತನ್ನೂ ಕೇಳಲಾರದೆ ಒಂದೇಸಮನಾಗಿ ಗೋಳಿಡು ತ್ತಿದ್ದಾನೆ. ಜಯದೇವ ಮಂತ್ರಿಯು ಆತನನ್ನು ಸಂತೈಸಲು ಯತ್ನಿಸಿದಂತೆಲ್ಲ ರಣನಾಯಕ ಹೆಚ್ಚು ಕೋಪಗೊಳ್ಳುತ್ತಿದ್ದಾನೆ. ಅವನು ಪುತ್ರ ದುಃಖದಿಂದ

ಕಂಗೆಟ್ಟು ಶೋಕದಗ್ಧನಾಗಿಹೋಗಿದ್ದಾನೆ. ಆ ಸಮಯದಲ್ಲಿ ಅಲ್ಲಿಗೆ ಕಿನ್ನರನು ಭೈರವ ನಾಯಕನ ಆಜ್ಞೆಯಂತೆ ಹಾಡುತ್ತ ಬರುತ್ತಾನೆ. ಅವನ ಹಾಡು ಕೇಳಿಸುವುದೇ ಹೊರತು ಈ ಜನಕ್ಕೆ ಕಿನ್ನರನು ಕಾಣಿಸುವುದಿಲ್ಲ. ಅವನ ಹಾಡಿನ ಧ್ವನಿ ಕೇಳುತ್ತ ಕೇಳುತ್ತ, ವೃದ್ಧನಾದ ಜಯದೇವನಿಗೂ ದುಃಖಾರ್ತನಾದ ರಣನಾಯಕನಿಗೂ ನಿದ್ರೆ ಬರುತ್ತದೆ. ಅದು ಆ ಕಿನ್ನರನ ಮಾಯಾಮಹಿಮೆಯೆಂದು ಅವರರಿಯರು. ಆಗ ದ್ರೋಹಬುದ್ಧಿಯ ರುದ್ರನಾಯಕನಿಗೆ ಬಹಳ ನೀಚವಾದ ಆಲೋಚನೆ ಹೊಳೆಯುತ್ತದೆ. ನಗರದ ರಾಜನಾದ ರಣನಾಯಕನು ಆ ನಿರ್ಜನ ದ್ವೀಪದಲ್ಲಿ ಮೈಮರೆತು ನಿದ್ರಿಸುತ್ತಿರುವ ಸಮಯದಲ್ಲಿ, ಅವನನ್ನು ಇರಿದು ತೀರಿಸಿಬಿಟ್ಟರೆ ರಂಗನಾಯಕನಿಗೆ ಸುಲಭವಾಗಿ ಅರಸುಪಟ್ಟ ಲಭಿಸುವುದೆಂದು ಅವನಿಗೆ ಸಲಹೆ ಕೊಡುತ್ತಾನೆ. ಮೊದಲು ಮೊದಲು ರಂಗನಾಯಕನಿಗೆ ಅದು ಒಪ್ಪಿಗೆಯಾಗುವುದಿಲ್ಲ. ಆದರೆ ಭ್ರಾತೃದ್ರೋಹಿ ರಂಗನಾಯಕನ ಒತ್ತರದ ಉಪದೇಶ ಮಹಿಮೆ ಅವನ ಸಂಕಲ್ಪವನ್ನು ಚಲನೆಗೊಳಿಸಿತು. ಗಾಳಿಗೊಡ್ಡಿದ ದೀಪ ಎಷ್ಟು ಹೊತ್ತು ತಡೆದೀತು ? ರಂಗನಾಯಕ ರುದ್ರನಾಯಕರು ಎಲ್ಲ ಧರ್ಮಕರ್ಮಗಳ ಯೋಚನೆಯನ್ನೂ ಕಿತ್ತೊಗೆದು ರಣನಾಯಕನ ಕೊಲೆಗೆ ಸಜ್ಜಾಗುತ್ತಾರೆ; ಇಬ್ಬರೂ ತಮ್ಮ ಕತ್ತಿಗಳನ್ನು ಒರೆಗಳಚಿ ಹಿಡಿದು ಸಿದ್ಧರಾಗುತ್ತಾರೆ. ಇದನ್ನು ತನ್ನ ದಿವ್ಯದೃಷ್ಟಿಯಿಂದ ತಿಳಿದ ಭೈರವನಾಯಕನು ಈ ಕಗ್ಗೊಲೆಯನ್ನು ತಪ್ಪಿಸುವ ಸಲುವಾಗಿ ಕಿನ್ನರನನ್ನು 'ಅಟ್ಟುತ್ತಾನೆ. ಅವನು ಅದೃಶ್ಯನಾಗಿ ಓಡಿಬಂದು ಜಯದೇವ ರಣನಾಯಕರ ಕಿವಿಗಳಲ್ಲಿ ಕೂಗಿ ಅವರನ್ನು ಎಚ್ಚರಗೊಳಿಸುತ್ತಾನೆ. ಗಾಬರಿಯಿಂದೆದ್ದ ಸ್ವಾಮಿಭಕ್ತ ಜಯದೇವನು "ಶಿವ ಶಿವಾ ದೊರೆಯಂ ಕಾಪಾಡು" ಎಂದು ಉದ್ಗಾರ ತೆಗೆದು ಕತ್ತಿ ಹಿಡಿಯುತ್ತಾನೆ. ಎದುರಿಗೆ ರುದ್ರ, ರಂಗರು ಬಿಚ್ಚುಕತ್ತಿಗಳನ್ನು ಹಿಡಿದು ನಿಂತಿದ್ದ ದೃಶ್ಯವನ್ನು ಕಂಡು ಜಯದೇವನಿಗೆ ಬಹಳ ಸಂದೇಹವಾಗುತ್ತದೆ. ಆ ನೀಚರು ತಾವು ಅರಸನ ಅಂಗರಕ್ಷಣೆಗೆಂದೇ ಹಾಗೆ ನಿಂತಿದ್ದುದಾಗಿ ಹೇಳಿದರೂ ನಂಬಲಾರದೆ ಜಯದೇವನು ಅರಸನಿಗೂ ಹೇಳಿ ಶಸ್ತ್ರಪಾಣಿಯಾಗಿ ಆ ಸ್ಥಳದಿಂದ ಹೊರಡುವಂತೆ ಪ್ರೇರಿಸುತ್ತಾನೆ. ಭೈರವ ನಾಯಕನ ಆದೇಶದಂತೆ ಇಷ್ಟೆಲ್ಲ ಕೆಲಸಗಳನ್ನು ನಿರ್ವಹಿಸಿಯಾದ ಮೇಲೆ ಕಿನ್ನರನು ಈ ಸಮಾಚಾರವನ್ನೆಲ್ಲ ಅವನಿಗೆ ತಿಳಿಸಲು ಓಡುತ್ತಾನೆ.

**ಶನಿಯನ ದ್ವೇಷ (ದೃಶ್ಯ ೪)**

ನಾಲ್ಕನೆಯ ದೃಶ್ಯದಲ್ಲಿ ಭೈರವನಾಯಕನ ಅರ್ಧಮಾನುಷ ಸೇವಕನಾದ

ಶನಿಯನು ತನ್ನ ನಿತ್ಯ ಕೃತ್ಯಗಳಲ್ಲಿ ತೊಡಗಿ ಬೇಸತ್ತು ತನ್ನ ಒಡೆಯನನ್ನು ಮನಸ್ಸಿ ಬೈಯುತ್ತಿರುವುದನ್ನು ಕಾಣುತ್ತೇವೆ. ಇವನ ಮನಸ್ಸಿನಲ್ಲಿ ಆ ದ್ವೀಪಕ್ಕೆ ತಾನೇ ಒಡೆಯನೆಂಬ ಭಾವನೆ ಬೇರೂರಿದೆ. ತನ್ನ ತಾಯಿ ಸತ್ತಮೇಲೆ ಬಂದು ದ್ವೀಪದ ಅಧಿಪತ್ಯವನ್ನು ಆಕ್ರಮಿಸಿಕೊಂಡ ಭೈರವನ ಮೇಲೆ ಶನಿಯನಿಗೆ ಮಹಾ ದ್ವೇಷ. ತನಗೆ ಶಕ್ಯವಿದ್ದಿದ್ದರೆ ಅವನು ಭೈರವನನ್ನು ತೀರಿಸಿಬಿಡುತ್ತಿದ್ದನು. ಆದರೆ ಅವನ ಮಂತ್ರಶಕ್ತಿಗೆ ತಾನು ಇದಿರಲ್ಲ. ಆದ್ದರಿಂದ ವಿಧಿಯಿಲ್ಲದೆ ಅವನ ಕೈಂಕರ್ಯವನ್ನು ಮಾಡುತ್ತಿರುವ ಶನಿಯನು ಭೈರವನಿಗೆ ಬರಬಾರದ ರೋಗ ಬರ ಲೆಂದು ಹಾರೈಸುತ್ತ, ಸೋತ ಶತ್ರುವಿನ ಮನೋಭಾವವನ್ನು ತೋರುತ್ತಾನೆ. ಇದ್ದಕ್ಕಿದ್ದಂತೆ ಅವನು ಆ ದ್ವೀಪದ ಮೇಲೆ ತ್ರಿಶಂಕು ಮತ್ತು ಬೀಮಣರನ್ನು ಕಂಡು ಆಶ್ಚರ್ಯಪಟ್ಟು ಅವರನ್ನು ಸ್ವರ್ಗದಿಂದಿಳಿದು ಬಂದ ದೇವತೆಗಳೆಂದೇ ತಿಳಿದು ಅವರನ್ನು ಆಶ್ರಯಿಸುತ್ತಾನೆ. ಬೀಮಣನಿಂದ ದೊರೆತ ಹೆಂಡದಿಂದ ಉತ್ಸಾಹಗೊಂಡ ಶನಿಯನು ಭೈರವನ ದೂಷಣೆ ಮಾಡಿ ಅವನನ್ನು ಕೊಂದು ಬಿಟ್ಟರೆ ನಿರಾತಂಕವಾಗಿ ಆ ದ್ವೀಪದ ಒಡೆತನವನ್ನು ಪಡೆಯಬಹುದೆಂದು ಹೇಳಿ ಆಸೆ ಹುಟ್ಟಿಸುತ್ತಾನೆ. ಇವನ ಸಹಾಯದಿಂದ ತನ್ನ ಪರಮ ವೈರಿಯ ಮೇಲೆ ಸೇಡು ತೀರಿಸಿಕೊಳ್ಳುವ ಯೋಚನೆ ಶನಿಯನಿಗೆ. ಈ ದುರಾಸೆಯ ಬಿರುಗಾಳಿ ಬೀಮಣ ತ್ರಿಶಂಕುಗಳ ಮೇಲೂ ಬೀಸಿ ಅವರನ್ನೂ ಕೊಲೆಗೆಲಸಕ್ಕೆ ಪ್ರೇರಿಸುತ್ತದೆ. ಬೀಮಣನು ಆಗಲೇ ಆ ದ್ವೀಪದ ಒಡೆಯನಾದಂತೆ ಭಾವಿಸಿಕೊಂಡು ಹರ್ಷ ಪಡುತ್ತಾನೆ. ಆದರೆ ಆ ಕ್ಷಣದಲ್ಲಿಯೇ ಅವರು ಭೈರವ ನಾಯಕನ ಮಾಯಾ ಜಾಲದಲ್ಲಿ ಸಿಕ್ಕಿಬಿದ್ದಿರುವ ಸಂಗತಿ ಅವರಿಗೆ ತಿಳಿಯದು. ಭೈರವನನ್ನು ಕೊಲ್ಲುವ ಭರವಸೆ ಬೀಮಣನಿಂದ ದೊರೆಯಲು ಶನಿಯನು ಮಹಾ ಹರ್ಷದಿಂದ ಕುಣಿದಾಡಿ ಬಿಡುತ್ತಾನೆ. ಅವನಿಗೆ ಬೀಮಣ ತ್ರಿಶಂಕುಗಳು ದೇವತೆಗಳೆಂದೇ ನಂಬಿಕೆ.

## ಸ್ಥಿರ ಪ್ರೇಮ (ದೃಶ್ಯ ೫)

ಐದನೆಯ ದೃಶ್ಯದಲ್ಲಿ ಶಿವನಾಯಕನು ತನಗೆ ಇಷ್ಟವಿಲ್ಲದಿದ್ದರೂ ಭೈರವನ ಕಟ್ಟಿಗೊಳಗಾಗಿ ಮರದ ತುಂಡುಗಳನ್ನು ಹೊತ್ತು ಒಟ್ಟುಗೂಡಿಸುವ ಕೆಲಸದಲ್ಲಿ ನಿರತನಾಗಿರುವುದನ್ನು ಕಾಣುತ್ತೇವೆ. ನಗರ ರಾಜ್ಯದ ಯುವರಾಜನಿಗೆ ಇಂಥಾ ಕಾಯಕಷ್ಟದ ಕೆಲಸಮಾಡಿ ಅನುಭವವಿಲ್ಲ. ಅವನು ಎಂದೂ ಇಂಥಾ ಕೀಳ್ಗೆಲಸ ಮಾಡಿದವನಲ್ಲ. ಆದರೆ ಈ ನಿರ್ಜನ ದ್ವೀಪದಲ್ಲಿ ಅವನ ಯುವರಾಜ ಪದವಿ ಯನ್ನು ಯಾರು ಗೌರವಿಸಬೇಕು ? ಭೈರವ ನಾಯಕ ಆ ದ್ವೀಪದ ಅನಭಿಷಿಕ್ತ

ರಾಜ. ಅಲ್ಲಿನ ಸಮಸ್ತ ಭೂತಶಕ್ತಿಗಳೂ ಅವನ ಕಿಂಕರರು. ಅವನ ಆಜ್ಞಾಬದ್ಧನಾಗಿ ಕಿನ್ನರನೊಬ್ಬನು ಅವನ ಸೇವಾತತ್ಪರನಾಗಿದ್ದಾನೆ. ಹೀಗಿರುವಾಗ ಶಿವನಾಯಕ ಅವನಿಗೆ ಅವಿಧೇಯನಾಗಿ ವರ್ತಿಸಿ ಬದುಕಲು ಸಾಧ್ಯವೆ? ಮೊದಲ ಭೇಟಿಯಲ್ಲಿ ಅವನ ಮಾತಿಗೆ ಸಿಟ್ಟಾಗಿ ಕತ್ತಿ ಹಿಡಿದಾಗಲೇ ಭೈರವನ ಮಂತ್ರ ಶಕ್ತಿಯ ಪರಿಚಯವಾಯಿತು. ಆ ಕ್ಷಣದಿಂದ ಅವನು ಭೈರವನಿಗೆ ಎದುರಾಡದೆ ತನಗೆ ಎಷ್ಟು ಶ್ರಮವಾದರೂ ಹಿಂದೆಗೆಯದೆ ಸೌದೆ ಹೊರುತ್ತಿರುತ್ತಾನೆ. ಆದರೆ ಗೌರಾಂಬೆಯ ಒಲವು ಅವನ ಬದುಕಿನ ಬೆಳಕಾಗಿದೆ. ಅವಳ ದರ್ಶನ ಅವನ ಪಾಲಿನ ಸೌಭಾಗ್ಯ. ಅವಳೊಡನೆ ಸಂಭಾಷಣೆ ಶಿವನಾಯಕನಿಗೆ ಸಂಜೀವನ. ಗೌರಾಂಬೆ ಶಿವನಾಯಕನಿಗೆ ಒಲಿದಿದ್ದಾಳೆ. ತನ್ನ ತಂದೆ ಅವನ ಮೇಲೆ ಏಕೆ ಇಷ್ಟು ಸಿಟ್ಟಾದನೆಂಬುದು ಅವಳಿಗೆ ದೊಡ್ಡ ಸಮಸ್ಯೆ. ಅವಳು ಶಿವನಾಯಕನಿಗೆ ಸಮಾಧಾನ ಹೇಳುತ್ತಾಳೆ; ದಣಿವಾರಿಸಿಕೊಳ್ಳೆಂದು ಉಪಚಾರ ಹೇಳಿ ಅವನ ಪರವಾಗಿ ತಾನು ಕೆಲಸ ಮಾಡಲು ಮುಂದೆ ಬರುತ್ತಾಳೆ. ಆದರೆ ಶಿವನಾಯಕನು ಅದಕ್ಕೆ ಒಪ್ಪನು. ಕೋಮಲೆಯ ಕೈಲಿ ಇಷ್ಟು ಒರಟು ಕೆಲಸ ಮಾಡಿಸುವುದೆ? ಅವರ ಸರಸ ಸಂಭಾಷಣೆಯ ನಡುವೆ ಗೌರಾಂಬೆ, ಮೈಮರೆತು ತಂದೆಯಾಣತಿಯನ್ನು ಮರೆತು ತನ್ನ ಹೆಸರನ್ನು ತನ್ನಿನಿಯನಿಗೆ ತಿಳಿಸುವಳು. ಆ ಕೂಡಲೆ ಪಶ್ಚಾತ್ತಾಪ ಪಡುವಳು. ಇದನ್ನೆಲ್ಲ ಮರೆಯಲ್ಲಿದ್ದು ಆಲಿಸುತ್ತಿದ್ದ ಭೈರವನಾಯಕನು ಮಗಳ ಪ್ರೇಮಾತಿಶಯವನ್ನು ಮನಗಾಣುವನು. ಶಿವನಾಯಕನ ಪ್ರೇಮವಾದರೂ ಸತ್ಯವೂ, ಸ್ಥಿರವೂ ಆದುದೆಂದು ಅವನಿಗೆ ಮನವರಿಕೆಯಾಗಿ ಅವರನ್ನು ಮನಸಾ ಹರಸುವನು. "ಮಗಳ ಸಂತಸಮಲ್ಲದಿನ್ನಾವ ಸಂತಸಂ ಪಿತೃಗೆ!"

ಗೌರಾಂಬೆ ಶಿವನಾಯಕರ ಪ್ರೇಮ, ಪ್ರಥಮ ಸಂದರ್ಶನದಲ್ಲಿಯೇ ಮೂಡಿ, ಬಹು ಬೇಗನೆ ಪರಿಪಕ್ವವಾಗಿ ವಿವಾಹದಲ್ಲಿ ಪರಿಣಮಿಸಿತು. ಇದು ಒಂದು ರೀತಿಯ ಸ್ವಯಂವರವೇ ಆಯಿತು. ಮುಗ್ಧೆಯಾದ ಗೌರಾಂಬೆ ಶಿವನಾಯಕನಲ್ಲಿ ಮನಸ್ಸುಳ್ಳವಳಾಗಿ ಅವನ ಮೇಲೆ ತನ್ನ ತಂದೆ ತೋರಿದ ಕಾಠಿಣ್ಯದಿಂದ ಕನಿಕರಪಟ್ಟು, ಅವನ ಸೌಜನ್ಯಕ್ಕೆ ಮಾರುಹೋಗಿ ಕಡೆಗೆ ಅವನನ್ನು ತನ್ನ ಇನಿಯನೆಂದು, ಎರೆಯನೆಂದು ನಿರ್ಧರಿಸಿಕೊಂಡಳು. ನಾಗರಿಕ ಪ್ರಪಂಚದ ವ್ಯವಹಾರ ರೀತಿಯನ್ನು ಕಂಡರಿಯದ ಆ ಮುಗ್ಧೆ "ನೀನೆನ್ನನ್ ಓವೊಡಾನ್ ನಿನ್ನರ್ಧಾಂಗಿಯಾದಪೆನ್" ಎಂದು ಸ್ಪಷ್ಟವಾಗಿ ನುಡಿದಳು. ಶಿವನಾಯಕನೂ ಹಾಗೆಯೇ

ಗೌರಾಂಬೆಯ ರೂಪ ಗುಣಗಳಿಗೆ ಮನಸೋತು, ಒಲಿದು ಅವಳನ್ನು ವರಿಸಿದನು. ಅವರ ಈ ಪ್ರೇಮ ಪಾರವಶ್ಯವನ್ನು ಮರೆಯಾಗಿ ನಿಂತು ಗಮನಿಸಿದ ಭೈರವನು ಸಂತೋಷಪಟ್ಟನು. ಆ ವೇಳೆಗೆ ಅವನಿಗೂ, ಶಿವನಾಯಕನ ಚರಿತ್ರೆಯಲ್ಲಿ ವಿಶ್ವಾಸ ಮೂಡಿತ್ತು.

### ಪಿತೂರಿಯ ಪ್ರಯತ್ನ (ದೃಶ್ಯ ೬)

ಆರನೆಯ ದೃಶ್ಯದಲ್ಲಿ ತ್ರಿಶಂಕು ಭೀಮಣರನ್ನು ಶನಿಯನು ಭೈರವನ ಕೊಲೆಗೆ ಹುರಿದುಂಬಿಸುವ ಕಥೆ ತೊಡಗುತ್ತದೆ. ಇಲ್ಲಿಯೂ ಕಿನ್ನರನು ಅದೃಶ್ಯನಾಗಿ ನಿಂತು ಅವರನ್ನು ಕೀಟಲೆಗೀಡು ಮಾಡುತ್ತಿರುತ್ತಾನೆ. ಕಿನ್ನರನಾಡಿದ ಮಾತುಗಳನ್ನು ತ್ರಿಶಂಕು ಆಡಿದನೆಂದು ಭ್ರಾಂತಿಪಟ್ಟು ಭೀಮಣ ಶನಿಯರು ಅವನನ್ನು ಬೈದು, ದಂಡಿಸಿ ಪೀಡಿಸುತ್ತಾರೆ. ಕಡೆಗೆ ಶನಿಯನು ಭೈರವನು ಮಲಗುವ ಹೊತ್ತು ಸಮೀಪಿಸಿತೆಂದೂ ಅವನು ನಿದ್ರಿಸಿರುವ ವೇಳೆಯಲ್ಲಿ ಅವನನ್ನು ಕೊಲ್ಲಬೇಕೇ ಹೊರತು, ಎಚ್ಚೆತ್ತ ಮೇಲೆ ಅವನು ಅಸಾಧ್ಯನೆಂದೂ ಹೇಳಿ ಭೀಮಣನನ್ನು ಆತುರಪಡಿಸಿ ಗುಹೆಯ ಬಳಿಗೆ ಕರೆದೊಯ್ಯುತ್ತಾನೆ.

### ದೃಶ್ಯ ೭

ಏಳನೆಯ ದೃಶ್ಯದಲ್ಲಿ ರಣನಾಯಕ ಮತ್ತು ಅವನ ಸಂಗಡಿಗರು ಶಿವನಾಯಕನ ಅನ್ವೇಷಣದಲ್ಲಿ ಆಸಕ್ತರಾಗಿ ದ್ವೀಪದಲ್ಲೆಲ್ಲಾ ಸುತ್ತಾಡಿ ಆಯಾಸಪಟ್ಟು ಕಂಗೆಟ್ಟಿರುವುದು ಕಾಣುತ್ತದೆ. ಮುದುಕ ಸರದಾರ ಜಯದೇವನಂತೂ ದೇಹಾಯಾಸದಿಂದ ತತ್ತರಿಸಿ ಹೋಗಿದ್ದಾನೆ. ಅವನಿಗೆ ಇನ್ನೊಂದು ಹೆಜ್ಜೆಯಿಡುವುದಕ್ಕೂ ಸಾಧ್ಯವಾಗದಷ್ಟು ಕಾಲುನೋವಾಗಿದೆ. ಪುತ್ರಜೀವಚಿಂತನಕಾತರನಾದ ರಣನಾಯಕನೂ ಕೂಡ ನಡೆದು ಬಳಲಿದ್ದಾನೆ. ಅವರ ಈ ದೇಹಾಯಾಸವನ್ನು ಗಮನಿಸಿದ ರುದ್ರನಾಯಕ ರಂಗನಾಯಕರು ಮನಸ್ಸಿನಲ್ಲಿ ಇನ್ನೊಂದು ಸಲ ಅವರು ಮೈಮರೆತು ಮಲಗಿದರೆ ಅವರನ್ನು ಕೊಂದು ತೀರಿಸಬೇಕೆಂದೂ, ಅಂಥ ಅವಕಾಶವನ್ನು ಕಳೆದುಕೊಳ್ಳಬಾರದೆಂದೂ ಯೋಚಿಸುತ್ತಿರುತ್ತಾರೆ. ಆ ವೇಳೆಯಲ್ಲಿ ಕಿನ್ನರನ ಸಂಗೀತ ಆಕಾಶವಾಣಿಯೋಪಾದಿಯಲ್ಲಿ ಕೇಳಿಸುತ್ತದೆ. ಆ ಅದ್ಭುತ ಗಾನಕ್ಕೆ ಜಯದೇವನು ಕೂಡಾ ಉತ್ಸಾಹಗೊಳ್ಳುತ್ತಾನೆ. ಆ ಹೊತ್ತಿಗೆ ಭೈರವನಾಯಕನು ಅಲ್ಲಿಗೆ ಅದೃಶ್ಯನಾಗಿ ಬಂದು ನಿಂತು ನೋಡುತ್ತಿರುತ್ತಾನೆ. ಹಲವಾರು ಕಿನ್ನರರು ವಿಧವಿಧವಾದ ಹಣ್ಣುಹಂಪಲುಗಳನ್ನು ತಂದು ಆ ಜನರೆದುರಿಗಿಟ್ಟು ಅವರನ್ನು ಉಪಾಹಾರಕ್ಕೆ ಆಹ್ವಾನಿಸುತ್ತಾರೆ. ಆ ಸುಮಧುರ ಸುಧಾ

ಸಂಗೀತ, ಈ ವಿವಿಧಫಲ ಸಮೂಹದ ದರ್ಶನಗಳಿಂದ ಅವರು ಹರ್ಷಚಿತ್ತರಾಗಿ ಮುಂದೆ ಹೆಜ್ಜೆಯಿಡುವಷ್ಟು ಹೊತ್ತಿಗೆ ಭೈರವನ ಆಪ್ತಕಿಂಕರನಾದ ಕಿನ್ನರನು ಮೊದಲೇ ನಿಶ್ಚಿತವಾಗಿದ್ದಂತೆ ಭಯಂಕರ ರಾಕ್ಷಸೀ ರೂಪದ ವೇಷಗಳನ್ನು ಧರಿಸಿ ನುಗ್ಗಿ ಬರುತ್ತಾನೆ. ಆ ಕೂಡಲೆ ಆ ಹಣ್ಣುಹಂಪಲುಗಳು ಮಾಯವಾಗುತ್ತವೆ. ಆಗ ಕಿನ್ನರನು ರಣನಾಯಕಾದಿಗಳನ್ನು ಸಂಬೋಧಿಸಿ "ನಿಮ್ಮಲ್ಲಿ ಮೂರು ಜನ ಪಾಪಿಗಳಿದ್ದಾರೆ. ವಿಧಿಯು ಅವರನ್ನು ಹೇಸಿ ಈ ದ್ವೀಪಕ್ಕೆ ಎಸೆದಿದೆ. ನಿಮಗೆ ತೊಳಲಿಕೆ ತಪ್ಪಿದ್ದಲ್ಲ" ಎಂದು ಅವರ ಹಿಂದಿನ ಪಾಪಕರ್ಮಗಳನ್ನು ಜ್ಞಾಪಿಸಿ ಅವರಿಗೆ ದಂಡನೆ ತಪ್ಪಿದ್ದಲ್ಲವೆಂದು ಹೇಳುತ್ತಾನೆ; ಭೈರವ ನಾಯಕನನ್ನು ಮೋಸದಿಂದ ದೇಶಭ್ರಷ್ಟನನ್ನಾಗಿ ಮಾಡಿದುದಕ್ಕೆ ಇದು ಪ್ರಾಯಶ್ಚಿತ್ತವೆಂದು ತಿಳಿಸುತ್ತಾನೆ. ಭೈರವನ ಹೆಸರನ್ನು ಅದೃಶ್ಯನಾದ ಕಿನ್ನರನ ಬಾಯಲ್ಲಿ ಕೇಳಿದ ರಣನಾಯಕ ಇನ್ನಿಷ್ಟು ಗಾಬರಿಯಾಗುತ್ತಾನೆ. ಅವನ, ಅವನ ಸಂಗಡಿಗರ, ಧೈರ್ಯ ತೊಲಗಿಹೋಯಿತು. ಇವರ ಮನೋಯಾತನೆಯನ್ನು ನೋಡಿದ ಭೈರವನು ತನ್ನ ಗುಹೆಯ ಬಳಿಯಿದ್ದ ಗೌರಾಂಬೆ ಶಿವನಾಯಕರನ್ನು ನೋಡಲು ಆತುರದಿಂದ ಅಲ್ಲಿಗೆ ಹೊರಡುತ್ತಾನೆ.

### ಪರಿಣಯ (ದೃಶ್ಯ ೮)

ಎಂಟನೆಯ ದೃಶ್ಯದಲ್ಲಿ ಭೈರವನು ಶಿವನಾಯಕನನ್ನು ಕಂಡು "ಬರಿದೆ ಚಿಂತೆಗೊಳಗಾಗದಿರು! ಕಷ್ಟಾಪಮಾನಗಳ ಒರೆಗಲ್ಲಿನಲಿ ನಿನ್ನ ಒಲ್ಮೆಪೊನ್ನನ್ ತಿಕ್ಕಿ ನೋಡಿಹೆನ್" ಎಂದು ಹೇಳಿ ಸಂತೈಸಿ, ತನ್ನ ಜೀವನದ ಉಸಿರಿನಂತೆ ತನಗೆ ಅತ್ಯಂತ ಪ್ರಿಯಳಾದ ಮಗಳನ್ನು ಅವನಿಗೆ ಧಾರೆಯೆರೆದು ಕೊಡುತ್ತಾನೆ. ಶಿವ ನಾಯಕನ ಸಂತೋಷ ಮೇರೆಯಿಲ್ಲದುದಾಯಿತು. ಭೈರವನು ತನ್ನ ಆಪ್ತಕಿನ್ನರನ ಸಹಾಯದಿಂದ ಹಲವು ಅದ್ಭುತ ಶಕ್ತಿಗಳ ಒಂದು ಸುಂದರ ನೃತ್ಯವನ್ನು ನವ ದಂಪತಿಗಳೆದುರಿನಲ್ಲಿ ಏರ್ಪಡಿಸಿ ಅವರನ್ನು ಸಂತೋಷಪಡಿಸುತ್ತಾನೆ. ಸಾಕ್ಷಾತ್ ನದೀದೇವಿಯೇ ಕಾಣಿಸಿಕೊಂಡು ನೃತ್ಯ ಮಾಡುತ್ತಾಳೆ. ಮುಗಿಲ ದೇವತೆಗಳು ದರ್ಶನ ನೀಡುತ್ತಾರೆ. ಊರ್ವಸಿಯ ನಾಟ್ಯ ನಡೆಯುತ್ತದೆ.

### ಪಿತೂರಿಭಂಗ

ಈ ವೈಭವವೆಲ್ಲ ಆದಮೇಲೆ ಭೈರವನಾಯಕನಿಗೆ ಶನಿಯನ ಪಿತೂರಿ ನೆನಪಿಗೆ ಬರುತ್ತದೆ. ಆ ಕೂಡಲೆ ಅವನು ತನ್ನ ಮಂತ್ರಶಕ್ತಿಯಿಂದ ನೃತ್ಯದ ಮೇಳವನ್ನು ಕಳುಹಿಸಿಬಿಟ್ಟು ಕೊಲೆಗಾರರನ್ನು ಇದಿರಿಸಲು ಸಿದ್ಧನಾಗುತ್ತಾನೆ.

ಭೈರವನ ಅಪ್ಪಣೆಯಂತೆ ಕಿನ್ನರನು ಗುಹೆಯೊಳಗಿನ ಕೆಲವು ಹಳೆಯ ಚಿಂದಿಬಟ್ಟೆಗಳನ್ನು ಹೊರಗೆ ಹಾಕಿರಲು ಅಲ್ಲಿಗೆ ಬಂದ ಭೀಮಣ್ಣ ತ್ರಿಶಂಕುಗಳು ಭೈರವನ ಮಾಯಾಮಂತ್ರ ಮಹಿಮೆಯಿಂದ ಆ ಚಿಂದಿಗಳನ್ನೇ ಶ್ರೇಷ್ಠವಾದ ದುಕೂಲಗಳೆಂದು ಭ್ರಾಂತಿಪಡುತ್ತಾರೆ. ಅವರ ಕಣ್ಣುಗಳಿಗೆ ಅವು ದಿವ್ಯವಾದ ಜರಿಯ ಪೀತಾಂಬರಗಳಂತೆ ತೋರುತ್ತವೆ. ಅವು ನನಗೆ ತನಗೆ ಎಂದು ತ್ರಿಶಂಕು ಭೀಮಣ್ಣರಿಬ್ಬರೂ ಕಚ್ಚಾಡುತ್ತಾರೆ; ಅವುಗಳನ್ನು ಧರಿಸಿಕೊಳ್ಳಲು ಬಹಳ ಸಂಭ್ರಮಪಡುತ್ತಾರೆ. ಆದರೆ ಅವರ ಜತೆಯಲ್ಲಿದ್ದ ಶನಿಯನು ಇದನ್ನು ಕಂಡು ಆಶ್ಚರ್ಯಪಡುತ್ತಾನೆ. ಈ ಹಾಳು ಚಿಂದಿಗಳಿಗೇಕೆ ಇಷ್ಟು ಸರದಾಟವೆಂದು ಅವನು ಯೋಚಿಸುತ್ತಾನೆ. ಈ ಕ್ಷುಲ್ಲಕ ವಸ್ತುಗಳಿಗಾಗಿ ಜಗಳವಾಡುತ್ತ ಹೊತ್ತುಗಳೆದರೆ ಭೈರವನು ಎದ್ದುಬಿಟ್ಟು ತಮ್ಮನ್ನು ಇನ್ನಷ್ಟು ಕಷ್ಟಕ್ಕೆ ಗುರಿಮಾಡುವನೆಂದು ಅವನ ಭಯ. ಆದರೆ ಅವನ ಮಾತುಗಳಿಗೆ ಇವರು ಲಕ್ಷ್ಯ ಕೊಡದೆ ಜಗಳ ಕಾಯುತ್ತಿರುತ್ತಾರೆ. ಆ ಹೊತ್ತಿಗೆ ಕೆಲವು ವಿಕಾರವಾದ ಆಕೃತಿಗಳು ನುಗ್ಗಿ ಬಂದು ಅಬ್ಬರಿಸುತ್ತ ಅವರನ್ನು ಅಪ್ಪುತ್ತವೆ. ಅವುಗಳ ಹಿಂದೆಯೇ ಕಿನ್ನರನೂ ಭೈರವನಾಯಕನೂ ಬರುತ್ತಾರೆ. ಭೀಮಣ್ಣ ತ್ರಿಶಂಕು ಶನಿಯ ಮೂವರೂ ಅಂಜಿ ಜೀವದಾಸೆಯಿಂದ ದಿಕ್ಕೆಟ್ಟು ಓಡುತ್ತಾರೆ. ಹೀಗೆ ಶನಿಯನು ನಡೆಸಿದ 'ಮಾರಿಯ ಪಿತೂರಿ' ಭಂಗವಾಗುತ್ತದೆ. ಇಲ್ಲಿಗೆ ಎಂಟನೆಯ ದೃಶ್ಯ ಮುಗಿಯುತ್ತದೆ.

## ಅಭಯ ಪ್ರದಾನ (ದೃಶ್ಯ ೯)

ಒಂಬತ್ತನೆಯ ದೃಶ್ಯ ಕಿನ್ನರ ಮತ್ತು ಭೈರವನಾಯಕನ ಸಂಭಾಷಣೆಯಿಂದ ಆರಂಭವಾಗುತ್ತದೆ. ಭೈರವ ನಾಯಕನ ಎಲ್ಲ ಇಚ್ಛೆಗಳೂ ಸಫಲವಾದಂತೆ ಕಾಣುತ್ತದೆ. ಅವನ ಮಂತ್ರಬಲದಿಂದ ಎಲ್ಲ ಕಾರ್ಯಗಳೂ ಕೈಗೂಡಿದುವು. ಸಂತೋಷದ ಯೋಜನೆಯಲ್ಲಿ ತೊಡಗಿದ ಭೈರವನಿಗೆ ಸಂಜೆಯಾದದ್ದು ತಿಳಿಯಲಿಲ್ಲ. ಕಿನ್ನರನು ಆ ಸಂಗತಿಯನ್ನು ಹೇಳಿ ರಾತ್ರಿಯೊಳಗಾಗಿ ಯೋಜನೆಯ ಪ್ರಕಾರ ಎಲ್ಲ ಕೆಲಸಗಳೂ ಮುಗಿಯಬೇಕೆಂದು ನೆನಪು ಮಾಡಿಕೊಡುತ್ತಾನೆ. ಅಂದು ಬೆಳಗ್ಗೆ ಬಿರುಗಾಳಿಯನ್ನೆಬ್ಬಿಸುವ ಮೊದಲು ಭೈರವನಾಯಕನು ತನಗೆ ಹೇಳಿದ ಆಲೋಚನೆ ಇದು. ರಣನಾಯಕನೇ ಮುಂತಾದವರು ದ್ವೀಪದ ಒಂದು ಮಾವಿನ ತೋಪಿನಲ್ಲಿ ಸೆರೆಯಾಗಿರುವರೆಂಬುದನ್ನು ಅವನು ಹೇಳಲು ಭೈರವನು

ನೀಡಿನ ಯೋಜನೆಯನ್ನು ಕೈಬಿಟ್ಟು ಅವರನ್ನೆಲ್ಲ ಕರೆತರುವಂತೆ ಕಿನ್ನರನಿಗೆ ಹೇಳಿ ಕಳುಹಿಸಿ ಅವರ ಸ್ವಾಗತಕ್ಕೆ ತನ್ನ ಗವಿಯಲ್ಲಿ ತಕ್ಕ ಸಿದ್ಧತೆಗಳನ್ನು ನಡೆಸುತ್ತಾನೆ.

ಇಷ್ಟು ಹೊತ್ತಿಗೆ ಕಿನ್ನರನು ರಣನಾಯಕ ಜಯದೇವ ಮೊದಲಾದವರನ್ನು ಗವಿಯ ಬಳಿಗೆ ಕರೆತರುತ್ತಾನೆ. ಭೈರವನು ಇದಿರಿನಲ್ಲಿಯೇ ನಿಂತಿದ್ದರೂ ಅವರಿಗೆ ಗುರುತು ಹತ್ತಲಿಲ್ಲ. ಜಯದೇವ ಮಂತ್ರಿಗೂ ಭೈರವನಾಯಕನ ಮಾತಿನಲ್ಲಿ ಸುಲಭವಾಗಿ ನಂಬಿಕೆ ಹುಟ್ಟಲಿಲ್ಲ. ಆಗ ಭೈರವನು ಕನಿಕರದಿಂದ ಅವರನ್ನು ಮುಸುಕಿದ ಮಾಯಾಜಾಲವನ್ನು ಬಿಡಿಸಿ ತನ್ನ ತಮ್ಮನಿಗೆ ಅಭಯ ಪ್ರದಾನ ಮಾಡಿ ಗೌರಾಂಬೆ ಶಿವನಾಯಕರನ್ನು ಅವರಿಗೆ ತೋರುವನು. ಆ ತಂದೆ ಮಕ್ಕಳ ಸಂದರ್ಶನ ಕರುಣಾಜನಕವಾಗಿದೆ. ಅಳಿದು ಹೋದನೆಂದೇ ಭಾವಿಸಿದ್ದ ತಮ್ಮ ಶಿವನಾಯಕ ಸುಖಿಯಾಗಿರುವುದನ್ನು ಕಂಡು ಅವರೆಲ್ಲ ಬೆರಗಾದರು. ಇದು ಅವರ ಪಾಲಿಗೆ ಮಹತ್ತರವಾದ ಪವಾಡವೇ ಆಯಿತು. ಕೊನೆಗೆ ಭೈರವ ನಾಯಕನು ತನ್ನ ಹಿಂದಿನ ವೃತ್ತಾಂತವನ್ನೆಲ್ಲ ಹೇಳಿದ ಮೇಲೆ ಜಯದೇವಾದಿಗಳ ಸಂಶಯವೆಲ್ಲ ದೂರವಾಯಿತು. ಹನ್ನೆರಡು ವರ್ಷಗಳ ಹಿಂದೆ ಕಣ್ಮರೆಯಾದ ಕೆಳದಿಯ ದೊರೆಯೇ ಅವನೆಂದು ಅವರಿಗೆ ನಂಬುಗೆಯಾಯಿತು. ಗೌರಾಂಬೆ ಶಿವನಾಯಕರ ಮದುವೆಯನ್ನು ಸ್ವದೇಶದಲ್ಲಿ ವಿಜೃಂಭಣೆಯಿಂದ ನೆರವೇರಿಸಲು ನಿರ್ಣಯಿಸಿಕೊಂಡರು. ರುದ್ರನಾಯಕ ರಂಗನಾಯಕರು ತಮ್ಮ ಪಾಪಕೃತ್ಯ ಗಳಿಗಾಗಿ ಪಶ್ಚಾತ್ತಾಪಪಡುವ ಮೊದಲೇ ಉದಾತ್ತ ಚಿತ್ತನಾದ ಭೈರವ ನಾಯಕನು ಅವರನ್ನು ಔದಾರ್ಯದಿಂದ ಕ್ಷಮಿಸಿದನು. ಎಲ್ಲರೂ ಕೆಳದಿಗೆ ಹೊರಡುವುದೆಂದು ನಿರ್ಧರವಾಯಿತು. ಭೈರವನ ಏಕಾಂತವಾಸ ಕೊನೆಗಂಡಿತು.

ಭೈರವನು ತಾನೇ ಹಿಂದೆ ಭಾಷೆ ಕೊಟ್ಟಿದ್ದಂತೆ ತನ್ನ ಆಪ್ತ ಕಿಂಕರನಾದ ಕಿನ್ನರನಿಗೆ ಬಿಡುಗಡೆ ನೀಡಿದನು. ಆ ಭಕ್ತನು ತನ್ನ ಒಡೆಯನ ಕಾರುಣ್ಯಕ್ಕೆ ಮಾರುಹೋಗಿ ಅವರು ನದಿ ದಾಟುವವರೆಗೆ ಅವರ ರಕ್ಷಣೆಗಾಗಿ ಅವರೊಂದಿಗಿದ್ದು, ಭೈರವನನ್ನು ಬೀಳ್ಕೊಂಡು, ಮಹಾ ಆನಂದದಿಂದ ಹೊರಟುಹೋದನು. ಮಹಾ ಕೋಲಾಹಲಕರವಾದ ಬಿರುಗಾಳಿಯಿಂದ ಆರಂಭವಾದ ಈ ಕಥೆ ಬಿರುಗಾಳಿಯ ವೇಗದಿಂದಲೇ ಸಾಗಿ ಕೊನೆಗೆ ಸುಖ ಸಂತೋಷಗಳಲ್ಲಿ ಪರ್ಯವಸಾನಗೊಳ್ಳುತ್ತದೆ. ವಿಹಾರಕ್ಕೆಂದು ದೋಣಿಯಲ್ಲಿ ಸಂಚಾರ ಹೊರಟ ನಗರದ ನಾಯಕರಿಗೆ ಪ್ರಾಣಾಪ ಹಾರಿಯಾಗಿ ತೋರಿದ ಬಿರುಗಾಳಿ ಕೊನೆಯಲ್ಲಿ ಅನಿರೀಕ್ಷಿತ ಆನಂದಕ್ಕೆ ಕಾರಣ ವಾಯಿತು. ಎಂದೋ ಅಳಿದುಹೋದನೆಂದು ಅವರು ಭಾವಿಸಿದ್ದ ಕೆಳದಿಯ

ಭೈರವನಾಯಕನ ಪುನರ್ದರ್ಶನ ಅದರಿಂದ ಅವರಿಗೆ ಲಭಿಸಿತು. ಕೆಳದಿ ಮತ್ತು ನಗರ ರಾಜ್ಯಗಳಿಗೆ ಅದುವರೆಗೆ ನಡೆದಿದ್ದ ವೈರ ಕೊನೆಗೊಂಡು ಮಂಗಳಕರವಾದ ವಿವಾಹ ಬೆಳೆಯಿತು.

೪

## ನಾಟಕದ ಹೆಸರು

'ಬಿರುಗಾಳಿ'ಯಲ್ಲಿ ಮುಖ್ಯವಾಗಿ ಕೆಳದಿಯ ನಾಯಕನಾದ ಭೈರವನ ಜೀವನದ ಒಂದು ಅಧ್ಯಾಯ ಕಥಾವಸ್ತು. ವಿದ್ರೋಹದ ಬಿರುಗಾಳಿಗೆ ಸಿಕ್ಕಿ ದೇಶಭ್ರಷ್ಟನಾದ ಆ ಸಾತ್ವಿಕ ಸ್ವಭಾವದ ಅರಸು ನಿರ್ಜನದ್ವೀಪದಲ್ಲಿ ಹನ್ನೆರಡು ವರ್ಷಗಳ ಕಾಲ ಸಾಹಸದಿಂದ ಬದುಕಿ ಬಾಳಿದ ಕಥೆ ಇದರಲ್ಲಿ ಮುಖ್ಯ. ಇದು ಭೈರವನ ವಿಜಯವೆಂದೇ ಹೇಳಬಹುದು. ಆಸುರೀ ಸ್ವಭಾವದ ರಾಜ್ಯದಾಹದಿಂದ ಪ್ರೇರಿತವಾದ ಬಂಧು ದ್ರೋಹ ಹೇಗೆ ಒಬ್ಬ ಉದಾತ್ತಚರಿತನನ್ನು ಘೋರವಾದ ಸಂಕಟಕ್ಕೀಡು ಮಾಡಿದರೂ ಆತನು ಹೇಗೆ ತನ್ನ ಸ್ವಶಕ್ತಿಯಿಂದ, ದೈವಾನುಗ್ರಹದಿಂದ, ಆ ಎಲ್ಲ ಕಷ್ಟಗಳನ್ನು ನೀಗಿಕೊಂಡು ಉತ್ತಮವಾದ ಋಷಿಜೀವನವನ್ನು ನಡೆಸುತ್ತಿದ್ದು ಕಡೆಗೆ ತನ್ನ ಕೈಗೆ ಅಸಹಾಯರಾಗಿ ಸಿಕ್ಕುಬಿದ್ದಂಥಾ ಆ ತನ್ನ ಪರಮ ಶತ್ರುಗಳನ್ನು ನಿಗ್ರಹಿಸದೆ ಕ್ಷಮೆಯಿಂದ ಕಾಪಾಡಿ ಉಪಕರಿಸಿದನೆಂಬುದೇ ಈ ನಾಟಕದಲ್ಲಿ ಓದುಗರ ಮನಸ್ಸಿನಲ್ಲಿ ನಿಲ್ಲುವ ಕಥಾಭಾಗ. ಭೈರವನಾಯಕ ತನ್ನ ಶಾಂತಿದಾಂತಿಗಳಿಂದ ಅಜಾತಶತ್ರುವಾದನೆಂಬುದು ಇಲ್ಲಿ ನಮ್ಮ ಮನಸ್ಸನ್ನು ಆಕರ್ಷಿಸುವ ಸಂಗತಿ. ಈ ನಾಟಕ ಭೈರವನಾಯಕನ ಉದಾತ್ತ ಚರಿತ್ರೆ.

ಈ ನಾಟಕದಲ್ಲಿ ಓದುಗರನ್ನು ಆಕರ್ಷಿಸುವ ಇನ್ನೊಂದು ಅಂಶವೆಂದರೆ ಗೌರಾಂಬೆ ಶಿವನಾಯಕರ ಪ್ರಣಯ ವೃತ್ತಾಂತ. ತನ್ನ ತಂದೆಯ ಹೊರತು ಬೇರೆ ಯಾವ ಮಾನವ ವ್ಯಕ್ತಿಯನ್ನೂ ಅದುವರೆಗೆ ಕಂಡರಿಯದ ಆ ಮುಗ್ಧ ಸುಂದರಿ ಗೌರಾಂಬೆಯು ಸುಂದರ ಯುವಕನಾದ ಶಿವನಾಯಕನನ್ನು ಕಂಡ ಕೂಡಲೆ ಅವನಲ್ಲಿ ಮೋಹಗೊಂಡು ಆ ಮೋಹ ಅಚಂಚಲ ಪ್ರೇಮವಾಗಿ ಬೆಳೆದ ಕಥೆ ಬಹಳ ರಮಣೀಯವಾಗಿದೆ. ಶಿವನಾಯಕ ನಗರ ಸಂಸ್ಥಾನದ ಯುವರಾಜ, ನಾಗರಿಕ ಪ್ರಪಂಚವನ್ನು ಚೆನ್ನಾಗಿ ಬಲ್ಲವನು. ತನ್ನ ತಂದೆಯ ಅರಮನೆಯಲ್ಲಿ, ಬೇರೆ ಕಡೆಗಳಲ್ಲಿ, ಹಲವರು ಸುಂದರ ರಮಣಿಯರನ್ನು ಕಂಡವನು. ಆದರೂ ಈ ನಿರ್ಜನ ದ್ವೀಪವಾಸಿನಿಯಾದ ಈ ಮುಗ್ಧೆಯನ್ನು ಕಂಡು ಅವಳ ರೂಪಕ್ಕೆ ಮೋಹಗೊಂಡು ಕ್ರಮೇಣ ಅವಳ ನಿಕಟ ಪರಿಚಯದಿಂದ ಅವಳ ಗುಣಾತಿಶಯ

ಗಳನ್ನು ಮನಗಂಡು ಮೆಚ್ಚಿ ಒಲಿದು ಅವಳನ್ನು ವರಿಸುವನು. ಈಯಿಬ್ಬರ ಒಲವಿನ ವಿವಾಹ ಭೈರವನಾಯಕನಿಗೆ ಹೆಚ್ಚಿನ ಆನಂದವನ್ನುಂಟುಮಾಡಿತು. "ನಿನ್ನ ಹಿತಕ್ಕಾಗಿಯೇ ಈ ಬಿರುಗಾಳಿಯನ್ನೆಬ್ಬಿಸಿದೆ" ಎಂದು ಭೈರವನು ತನ್ನ ಮಗಳೊಡನೆ ಹೇಳುವಾಗ ಆತನ ಉದ್ದೇಶ ಬಹಳ ಮಟ್ಟಿಗೆ? ಮಗಳ ಮದುವೆಯೇ ಇರಬಹುದು. ನಾಟಕ ಮುಗಿಯುವುದು ಈ ಪ್ರಣಯಿಗಳ ವಿವಾಹೋತ್ಸವ ದಿಂದ. ಆದ್ದರಿಂದ ಗೌರಾಂಬೆಯ ಪರಿಣಯದ ಕಥೆ ಈ ನಾಟಕದಲ್ಲಿ ಮುಖ್ಯ ವಾದುದೇ ಸರಿ: ನಾಟಕಕ್ಕೆ ಹೆಸರು ಕೊಟ್ಟಿರುವ ಬಿರುಗಾಳಿಯ ಕಲ್ಪನೆ ಭೈರವ ನಾಯಕನ ಮನಸ್ಸಿನಲ್ಲಿ ಮೂಡಿದ್ದು, ಇವಳಿಗಾಗಿ. ಕಿನ್ನರನ ಸಹಾಯದಿಂದ ಭೈರವನು ಹೂಡಿದ ಹಲವು ತಂತ್ರಗಳು ಈ ಮಂಗಳ ಸಾಧನೆಗಾಗಿಯೇ ಹೊರತು ಬೇರೆಯಲ್ಲ. ಆದ್ದರಿಂದ ಈ ನಾಟಕಕ್ಕೆ 'ಗೌರಾಂಬೆಯ ಪರಿಣಯ'ವೆಂದು ಹೆಸರಿಟ್ಟರೂ ತಪ್ಪಲ್ಲ.

ಭೈರವನಾಯಕ ಕೆಳದಿಯ ನಾಯಕನಾಗಿದ್ದಾಗ ಅವನ ತಮ್ಮನ ಹೃದಯದಲ್ಲಿ ಹುಟ್ಟಿದ ರಾಜ್ಯದಾಹ, ಅಧಿಕಾರವ್ಯಾಮೋಹ, ದ್ರೋಹಚಿಂತನೆಗಳ ರಭಸದಲ್ಲಿ ಅವನ ಧರ್ಮಬುದ್ಧಿ, ಭ್ರಾತೃಪ್ರೇಮ, ನ್ಯಾಯ ವಿವೇಕಗಳೆಲ್ಲ ಹಾರಿ ಹೋದುವು. ಆದ್ದರಿಂದಲೇ ಅವನು ಕೆಳದಿಯ ಶತ್ರುಗಳೊಡನೆ ಸಂಚು ಮಾಡಿ ಅಣ್ಣನನ್ನು ಸಿಂಹಾಸನ ಚ್ಯುತನಾಗಿ ಮಾಡಿದನು. ದ್ರೋಹ ಚಿಂತನೆಯ ಬಿರು ಗಾಳಿಗೆ ಸಿಕ್ಕಿದ ಯಾವ ಧರ್ಮವಿವೇಕವೂ ನಿಲ್ಲಲಾರದೇನೋ! ಅಣ್ಣನನ್ನು ರಾಜ್ಯದಿಂದ ಓಡಿಸಿದರೂ ರುದ್ರನಾಯಕನ ಅಂತರಂಗದಲ್ಲಿ ದ್ರೋಹಬುದ್ಧಿ ಅಡಗಲಿಲ್ಲ. ಹನ್ನೆರಡು ವರ್ಷಗಳಾದ ಮೇಲೆ ನಿರ್ಜನ ದ್ವೀಪದಲ್ಲಿ ನಿರ್ಗತಿಕ ರಾಗಿ ಬಂದು ಬಿದ್ದಿರುವ ದುಃಖದ ಸ್ಥಿತಿಯಲ್ಲಿ ಅವನು, ತನ್ನ ಮಗ ಶಿವನಾಯ ಕನು ಜೀವಿಸಿರುವನೋ, ಇಲ್ಲವೋ ಎಂಬ ಸಂಶಯಕ್ಕೆ ಸಿಕ್ಕಿ ತೊಳಲುತ್ತಿರುವ ರಣನಾಯಕನನ್ನು ಕೊಂದು ಅವನ ರಾಜ್ಯಪದವಿಯನ್ನು ಆಕ್ರಮಿಸಿಕೊಳ್ಳುವಂತೆ ಅವನ ತಮ್ಮ ರಂಗನಾಯಕನಿಗೆ ಸಲಹೆ ಕೊಡುತ್ತಾನೆ. ಅವನು ಒಪ್ಪದಿರಲು ಅವನಿಗೆ ತನ್ನ ಉದಾಹರಣೆಯನ್ನು ಹೇಳಿ, ನಾನಾ ರೀತಿಯಿಂದ ಧೈರ್ಯ ಹೇಳಿ, ಆ ನೀಚ ಕಾರ್ಯಕ್ಕೆ ಒಪ್ಪಿಸಿ ಅವನಿಗೆ ಸಹಾಯ ಮಾಡಲು ಸಿದ್ಧನಾಗುತ್ತಾನೆ. ಒಮ್ಮೆ ದ್ರೋಹ ಚಿಂತನೆಗೆ ಮನಸ್ಸು ಕೊಟ್ಟವನು ಬಿರುಗಾಳಿಗೆ ಸಿಕ್ಕಿದ ತರಗೆಲೆ ಯಂತೆ ಆಗಿಬಿಡುತ್ತಾನೆ. ನಾನಾ ದುಃಖ-ಅಪಮಾನಗಳಿಗೆ ಗುರಿಯಾದರೂ ಅಂತಹವರಿಗೆ ವಿವೇಕ ಹುಟ್ಟುವುದು ಕಷ್ಟ. ಪಾಪಕಾರ್ಯ ಎಷ್ಟೇ ರಭಸವಾಗಿ

ನಡೆದರೂ, ಅದಕ್ಕೆ ಪ್ರಾಯಶ್ಚಿತ್ತ ರೂಪವಾಗಿ ಬರುವ ಶಿಕ್ಷೆಯೂ ಬಿರುಗಾಳಿಯಂತೆಯೇ ಬಂದು ಇವರ ಎಲ್ಲ ಶಕ್ತಿ ಸಾಮರ್ಥ್ಯಗಳನ್ನೂ ಉಡುಗಿಸಿಬಿಡುತ್ತದೆ. ಯಾವ ಪಾಶವೀ ಶಕ್ತಿಯೂ ದೈವೀ ಶಕ್ತಿಯನ್ನು ಸೋಲಿಸಲಾರದು. ಮಾನವರ ಹೃದಯರಂಗದಲ್ಲಿ ಈ ದುಷ್ಟ ಶಕ್ತಿಗಳಿಗೂ ಶಿಷ್ಟ ಶಕ್ತಿಗಳಿಗೂ ಸದಾ ಹೋರಾಟ ನಡೆಯುತ್ತಲೇ ಇರುತ್ತದೆ. ಇವರಲ್ಲಿ ಎಚ್ಚರದಪ್ಪಿದರೆ ಆತ್ಮನು ಲೋಭ, ಮೋಹ, ವಂಚನೆ ಮತ್ಸರಗಳ ಬಿರುಗಾಳಿಯಲ್ಲಿ ಕೊಚ್ಚಿಕೊಂಡು ಹೋಗುತ್ತಾನೆ. ಹಾಗಾಗದೆ ಅವನು ಸುಖಿಯಾಗಬೇಕಾದರೆ ಆ ಬಿರುಗಾಳಿಯನ್ನು ಅಡಗಿಸಿ ಶಾಂತಿ-ಸೈರಣೆಗಳನ್ನು ಸಾಧಿಸಿ ಕೃತಕೃತ್ಯನಾಗಬೇಕು; ಕ್ಷಮಾಮೂರ್ತಿಯಾಗಬೇಕು, ಉದಾತ್ತ ಚರಿತನಾಗಬೇಕು. ಈ ತತ್ವ 'ಬಿರುಗಾಳಿ' ನಾಟಕದಲ್ಲಿ ಬಹಳ ಚೆನ್ನಾಗಿ ನಿರೂಪಿತವಾಗಿದೆ. ಈ ನಾಟಕದಲ್ಲಿ ಶನಿಯನ 'ಪಿತೂರಿ,' ರಂಗನಾಯಕ, ರುದ್ರನಾಯಕರ ಪಿತೂರಿ ಎಲ್ಲವೂ ಹೇಗೆ ಕೊನೆಯಲ್ಲಿ ಭೈರವನಾಯಕನ ಉದಾತ್ತ ಸ್ವಭಾವದಿಂದ ಭಂಗವಾದುವೆಂಬುದನ್ನು ಕಾಣುತ್ತೇವೆ.

## ಮಾಯಾದ್ವೀಪ

ಭೈರವನಾಯಕನ ಉದಾತ್ತ ಚಾರಿತ್ರ್ಯ ನಿರೂಪಣೆ, ಗೌರಾಂಬೆ ಶಿವನಾಯಕರ ಪ್ರಣಯ ವೃತ್ತಾಂತಗಳೇ ಅಲ್ಲದೆ ಈ ನಾಟಕದಲ್ಲಿ ಇನ್ನೊಂದು ಕಥಾಭಾಗವೂ ಪ್ರಧಾನವಾಗಿ ಕಾಣುತ್ತದೆ ಈ ನಿರ್ಜನ ದ್ವೀಪ ಅನೇಕ ಅದ್ಭುತ ಸಂಗತಿಗಳ ನೆಲೆವೀಡು. ಭೈರವನು ಅಲ್ಲಿಗೆ ಆಕಸ್ಮಾತ್ ಬರುವ ಮುಂಚೆ ಅಲ್ಲೊಬ್ಬ ಮಂತ್ರವಾದಿನಿ ಒಡತಿಯಾಗಿದ್ದಳು. ಅವಳು ತನ್ನ ಮಾಯಾಶಕ್ತಿಯಿಂದ ಕಿನ್ನರನೇ ಮೊದಲಾದ ಹಲವು ದಿವ್ಯ ಶಕ್ತಿಗಳನ್ನು ಸೆರೆ ಹಿಡಿದಿಟ್ಟು ಪೀಡಿಸುತ್ತಿದ್ದಳು. ಅನೇಕ ಅಂತರ ಜಂತರ ಭೇತಾಳಗಳು ಅವಳ ಸ್ವಾಧೀನವಾಗಿದ್ದುವು. ಅವಳ ಮರಣಾನಂತರ ಅವಳ ಮಗ ಶನಿಯನೊಬ್ಬನೇ ಆ ದ್ವೀಪದಲ್ಲಿದ್ದ ಮಾನವ ಜಾತಿಯವನು. ಭೈರವ ಅವನನ್ನು ತನ್ನ ಆಳಾಗಿ ಮಾಡಿಕೊಂಡು ಅಜ್ಞಾನಿಯೂ ಅನಾಗರಿಕನೂ ಆದ ಅವನಿಗೆ ಹಲವು ವಿದ್ಯೆಗಳನ್ನು ಕಲಿಸಿದನು. ಆದರೆ ಅವನಿಗೆ ಭೈರವನ ಮೇಲೆ ಮತ್ಸರ. ತನ್ನ ದೇಶಕ್ಕೆ ಆಗಂತುಕನಾಗಿ ಬಂದು ನೆಲಸಿ ತನ್ನ ಮೇಲೆಯೇ ಇವನು ದರ್ಪ ಮಾಡುವುದನ್ನು ಅವನು ಸಹಿಸನು. ಆದರೆ ಭೈರವನ ಉನ್ನತಮಟ್ಟದ ಮಂತ್ರಶಕ್ತಿಗೆ ಇವನು ಬಲಿಬಿದ್ದಿದ್ದನು. ಭೈರವನನ್ನು ಏನು ಮಾಡುವುದಕ್ಕೂ ಅವನು ಅಸಮರ್ಥನಾಗಿದ್ದನು.' ಆದ್ದರಿಂದ ಸಮಯನ್ನು ಸಿಕ್ಕಾಗಲೆಲ್ಲ ಅವನ ಮನಸ್ಸಿ ಬೈದು ಸಂತೃಪ್ತನಾಗುತ್ತಿದ್ದನು.

ಶನಿಯನಂತೆಯೇ ಭೈರವನಿಗೆ ಕಿಂಕರನಾದವನು ಕಿನ್ನರ. ಆದರೆ ಭೈರವನಿಂದ ಉಪಕಾರ ಹೊಂದಿದವನು. ಆ ಮಂತ್ರವಾದಿನಿ ಇವನನ್ನು ಒಂದು ಮರದಲ್ಲಿ ಸೆರೆಹಾಕಿದ್ದಳು. ಆ ಸಂಕಟದಿಂದ ಕಿನ್ನರನನ್ನು ತಪ್ಪಿಸಿ ಉದ್ಧಾರ ಮಾಡಿದವನು ಭೈರವನಾಯಕ. ಈ ಉಪಕಾರ ಸ್ಮರಣೆಯಿಂದ ಕಿನ್ನರನು ಬಹಳ ಉತ್ಸಾಹ ಸಂತೋಷಗಳಿಂದ ನಾಯಕನ ಸೇವೆ ಮಾಡುತ್ತಿದ್ದನು. ಇವನು ಅದೃಶ್ಯನಾಗಿದ್ದು ಇತರರ ವರ್ತನೆಯನ್ನು ಗಮನಿಸಬಲ್ಲ. ಬೇಕಾದಾಗ ಬಿರುಗಾಳಿ ಯೆಬ್ಬಿಸಿ, ಬೇಡದಾಗ ಶಾಂತಿಗೊಳಿಸಿ, ಗಾಳಿ ಮಳೆಗಳು ಕೂಡ ತನ್ನ ಇಷ್ಟಾನುಸಾರ ವರ್ತಿಸುವಂತೆ ಮಾಡಬಲ್ಲ ಅತಿಮಾನುಷ ಶಕ್ತಿಯುಳ್ಳವನು, ಕಿನ್ನರ. ಅವನಿಗೆ ತನ್ನ ಸ್ವಾತಂತ್ರ್ಯದ ಮೇಲೆ ಬಹಳ ಆಸೆ. ತನ್ನ ಇಂದಿನ ಒಡೆಯನಾದ ಭೈರವನಾಯಕನು ಬಹಳ ಒಳ್ಳೆಯವನಾದರೂ ಕಿನ್ನರನಿಗೆ ಸ್ವಾತಂತ್ರ್ಯವೇ ಜೀವನ ಸಾರವೆಂಬ ನಂಬಿಕೆ. ಆದ್ದರಿಂದ ಅವನು ಈ ದಾಸ್ಯದಿಂದ ಬಿಡುಗಡೆ ಬಯಸುತ್ತಿದ್ದನು. ಶನಿಯನ ಹಾಗೆ ಇವನು ಭೈರವನಿಗೆ ದ್ರೋಹ ಬಗೆಯದೆ, ಅವನ ಮೇಲೆ ಮತ್ಸರ ತೋರದೆ, ಅವನ ವಿಶ್ವಾಸ ಸಂಪಾದಿಸಲು ಮನಮುಟ್ಟಿ ಯತ್ನ ಮಾಡಿ ಕೊನೆಗೆ ಕೃತಾರ್ಥನಾದನು. ಈ ನಾಟಕದಲ್ಲಿ ಕಿನ್ನರನ ಕಥೆ ಬಹಳ ಸುಂದರವೂ ಚಿತ್ತಾಕರ್ಷಕವೂ ಆಗಿದೆ. ಇವನ ಸಹಾಯದಿಂದಲೇ ಭೈರವನಾಯಕನು ತನ್ನ ಇಷ್ಟಾರ್ಥವನ್ನು ಸಾಧಿಸಿಕೊಂಡನು. ಈ ನಾಟಕದಲ್ಲಿ ಕೇಳಿ ಬರುವ ಹಲವು ಅಶರೀರವಾಣಿಗಳು, ಮಧುರ ಗಾನಗಳು, ಗೌರಾಂಬೆಯ ವಿವಾಹೋತ್ಸವದಲ್ಲಿ ಏರ್ಪಡಿಸಿದ 'ದೇವಶಕ್ತಿಗಳ ನಾಟ್ಯ' ಇವೆಲ್ಲ ಈ ದ್ವೀಪದ ಒಂದು ಅದ್ಭುತ ಲಕ್ಷಣವನ್ನು ಪ್ರದರ್ಶಿಸುತ್ತವೆ. ನಾಟಕದ ಆರಂಭದಿಂದ ಅಂತ್ಯದವರೆಗೆ ಈ ಅದ್ಭುತ ದ್ವೀಪದ ಮಾಯಾಜಾಲದ ವರ್ಣನೆ ಇದ್ದೇ ಇದೆ. ಈ ನಾಟಕ ಮಾಯಾದ್ವೀಪವೆಂಬ ಹೆಸರು ಪಡೆದಿದ್ದರೂ ತಪ್ಪಾಗುತ್ತಿರಲಿಲ್ಲವೋ ಏನೋ! ಈ ದ್ವೀಪಕ್ಕೆ ಬಂದ ಭೈರವನಾಯಕ, ರಣನಾಯಕ, ಜಯದೇವ ಮುಂತಾದ ಭಿನ್ನ ಭಿನ್ನ ವ್ಯಕ್ತಿಗಳು ಈ ದ್ವೀಪದ ಅದ್ಭುತ ಪ್ರಭಾವಕ್ಕೆ ಸಿಕ್ಕಿ ಅನುಭವಿಸಿದ ಕಷ್ಟಸುಖಗಳ ವರ್ಣನೆಯೇ ಈ ನಾಟಕದ ಒಂದು ಮುಖ್ಯ ಲಕ್ಷಣವಾಗಿದೆ.

### ಅರ್ಥಪೂರ್ಣ

ಹೀಗೆ ಈ ನಾಟಕದಲ್ಲಿ ಬೇರೆ ಬೇರೆ ಕಥಾಂಶಗಳು ಒಟ್ಟುಗೂಡಿ ಒಂದು ಸುಂದರ ಸಮ್ಮೋಹಕ ಕಥೆಯಾಗಿ ರೂಪುಗೊಂಡಿರುವುದನ್ನು ಕಾಣುತ್ತೇವೆ. ಈ

ನಾಟಕಕ್ಕೆ 'ಭೈರವವಿಜಯ,' 'ಗೌರಾಂಬೆಯ ಪರಿಣಯ' ಮುಂತಾದ ಯಾವ ಹೆಸರನ್ನೂ ಕೊಡದೆ ' ಬಿರುಗಾಳಿ ' ಎಂದು ಹೆಸರು ಕೊಟ್ಟಿರುವುದರಲ್ಲಿ ಬಹಳ ಅರ್ಥವಿದೆ. ಭೈರವ ತನಗೆ ದ್ರೋಹ ಮಾಡಿದ ತಮ್ಮನೇ ಮೊದಲುಗೊಂಡು ಹಲವರ ಮೇಲೆ ಇಟ್ಟುಕೊಂಡಿದ್ದ ಕ್ರೋಧವನ್ನು ತೀರಿಸಿಕೊಳ್ಳಲು ಹೂಡಿದ ಮುಖ್ಯ ತಂತ್ರ ಈ ಬಿರುಗಾಳಿ. ಆ ವೈರಿಗಳನ್ನು ಅವರು ಕುಳಿತಿದ್ದ ದೋಣಿ ಯಿಂದ ಬೇರ್ಪಡಿಸಿದ್ದೂ ಈ ಬಿರುಗಾಳಿ. ಮತ್ತೆ ಅದರಲ್ಲಿದ್ದ ಯಾರೊಬ್ಬರನ್ನೂ ಸಾಯಗೊಡದೆ ಎಲ್ಲರನ್ನೂ ದಡ ಹತ್ತಿಸಿ ಆ ದೋಣಿಯನ್ನು ದ್ವೀಪದ ಕೊಲ್ಲಿಯಲ್ಲಿ ಸುರಕ್ಷಿತವಾಗಿ ತಂದು ಕಟ್ಟಿದ್ದೂ ಈ ಬಿರುಗಾಳಿಯನ್ನೆಬ್ಬಿಸಿದ ಕಿನ್ನರನೇ ಆಗಿ ದ್ದಾನೆ. ದ್ವೀಪದ ತೀರದಲ್ಲಿ ಎಚ್ಚೆತ್ತ ಆ ದೋಣಿಯ ಪ್ರಯಾಣಿಕರೊಬ್ಬೊಬ್ಬರೂ ತಾನು ವಿನಾ ಉಳಿದವರೆಲ್ಲ ಸತ್ತರೆಂದೇ ತಿಳಿದು ಗಾಬರಿಗೊಂಡು ಕ್ರಮೇಣ ಎಲ್ಲರೂ ಸೇರುತ್ತಾರೆ. ಈ ನಾಟಕದ ಪ್ರತಿ ಘಟನೆಗೂ ಪ್ರತ್ಯಕ್ಷವಾಗಿ ಅಥವಾ ಅಪ್ರತ್ಯಕ್ಷವಾಗಿ ಈ ಬಿರುಗಾಳಿಯೇ ಕಾರಣ. ಈ ಬಿರುಗಾಳಿಯೇಳದೆ ಗೌರಾಂಬೆಯ ಪ್ರಣಯ ಕಥೆಯಿಲ್ಲ. ರಂಗನಾಯಕ ರುದ್ರನಾಯಕರು ನಗರದ ರಾಜನಾದ ರಣನಾಯಕನನ್ನು ಕೊಲ್ಲುವ ಮಸಲತ್ತೂ ಈ ಬಿರುಗಾಳಿಯ ಫಲವೇ ಆಗಿದೆ.

ಭೈರವನಾಯಕನು ಈ ಬಿರುಗಾಳಿಯನ್ನೆಬ್ಬಿಸಲು, ಅವನ ಹೃದಯ ಗಗನ ದಲ್ಲೆದ್ದಿದ್ದ ಪ್ರತಿಹಿಂಸಾಕಾಂಕ್ಷೆಯ ಬಿರುಗಾಳಿಯೇ ಕಾರಣವೆನ್ನಬಹುದು. ಹನ್ನೆರಡು ವರ್ಷಗಳಷ್ಟು ದೀರ್ಘಕಾಲ ಈ ರಾಜನು ಆ ನಿರ್ಜನವಾದ ದ್ವೀಪದಲ್ಲಿ ಮಾನವ ಮಾತ್ರರನ್ನು ಕಾಣದೆ ಹಲವು ದುಷ್ಟಶಕ್ತಿಗಳ ನಡುವೆ ಜೀವನ ನಡೆಸು ತ್ತಿರುವಾಗ ತನಗಿಷ್ಟು ಕೇಡನ್ನು ತಂದೊಡ್ಡಿದ ದ್ರೋಹಿಗಳನ್ನು ನೆನೆದು ಎಷ್ಟು ಕೋಪಗೊಂಡಿರಬಹುದು! ಅವರ ವೈರಕ್ಕೆ ಪ್ರತಿವೈರ ಮಾಡಬೇಕೆಂಬ ಅಪೇಕ್ಷೆ ಆತನ ಮನಸ್ಸಿನಲ್ಲಿ ಹುಟ್ಟಿದ್ದರೆ ಆಶ್ಚರ್ಯವೇನು? ಆದರೆ ದೂರದ ಕೆಳದಿಯಲ್ಲಿನ ತನ್ನ ತಮ್ಮನಿಗೆ, ನಗರದ ರಾಜನಿಗೆ, ತಾನು ಮಾಡಬಹುದಾದ ಹಿಂಸೆಯಾದರೂ ಏನು? ತನ್ನ ಮೇಲಿನ ಒಂದು ಮತ್ಸರದಿಂದ ಯಾವ ತಪ್ಪನ್ನೂ ಅರಿಯದ ತನ್ನ ಮಗಳಿಗೂ ನಾಗರಿಕ ಜೀವನದ ಯಾವ ಸೌಖ್ಯವೂ ಇಲ್ಲದಂತೆ ಮಾಡಿದ ಆ ಪಾಪಿಗಳ ಮೇಲೆ ಮಹಾ ಕ್ರೋಧ ಹುಟ್ಟಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಇಂಥಾ ವಿಚಾರಗಳ ಬಿರುಗಾಳಿ ಭೈರವನ ಮನಸ್ಸಿನಲ್ಲಿ ತನ್ನ ರೌದ್ರನೃತ್ಯವನ್ನು ನಡೆಸುತ್ತಿರುವ ವೇಳೆಯಲ್ಲಿ ಆ ದ್ವೀಪಕ್ಕೆ ಸಮೀಪದಲ್ಲಿಯೇ ತನ್ನ ವೈರಿಗಳೆಲ್ಲ

ಒಟ್ಟಾಗಿ ಒಂದೇ ದೋಣಿಯಲ್ಲಿ ಕುಳಿತು ಬರುತ್ತಿರುವುದು ಕಾಣಿಸಿತು. ಆ ಕ್ಷಣ ಅವನು ಕಿನ್ನರನನ್ನು ಕರೆದು ಬಿರುಗಾಳಿನ್ನೆಬ್ಬಿಸಿದನು.

ಭೈರವನ ಹೃದಯಾಂತರಾಳದ ಪ್ರತಿಹಿಂಸೆಯ ಬಿರುಗಾಳಿ ನದಿಯಲ್ಲಿ ಪ್ರಚಂಡವಾದ ಬಿರುಗಾಳಿಯಾಗಿ ದೋಣಿಯನ್ನು ಮುಳುಗಿಸಿತು. ಆದರೆ ಆ ಜನರ ಗೋಳು ಸಂಕಟಗಳನ್ನು ಕಂಡು ಭೈರವನ ಪ್ರತಿಹಿಂಸೆಯ ಆಸೆ ನಶಿಸಿತು. ಅವನ ದೈವೀ ಸ್ವಭಾವ ಗೆದ್ದಿತು. ಪಾಪಿಗಳನ್ನು ಕ್ಷಮಿಸಿ ತನ್ನ ಹಿರಿತನವನ್ನು ಮೆರೆದನು. ಸೂರ್ಯೋದಯ ಸಮಯದಲ್ಲಿ ಬಿರುಗಾಳಿ ಎದ್ದರೆ ಮತ್ತೆ ಸೂರ್ಯಾಸ್ತಮಯದ ಸಮಯಕ್ಕೆ ಗೌರಾಂಬೆ ಶಿವನಾಯಕರ ಪರಿಚಯ, ಪ್ರೇಮಾಲಾಪ, ಪರೀಕ್ಷೆ ಪರಿಣಯಗಳೆಲ್ಲ ಮುಗಿದು ಹೋಗುತ್ತವೆ! ಈ ನಾಟಕದ ಕಥೆಯೂ ಕೂಡ ಬಿರುಗಾಳಿಯ ವೇಗದಲ್ಲಿಯೇ ನಡೆದು ಹೋಗುತ್ತದೆ! ಅಂತೂ ಇಡೀ ನಾಟಕದಲ್ಲಿ ಬಿರುಗಾಳಿಯ ಪ್ರಭಾವ ಕಾಣುತ್ತದೆ. ಪ್ರತಿ ದೃಶ್ಯದಲ್ಲಿಯೂ ಒಂದಲ್ಲ ಒಂದು ರೀತಿಯಿಂದ ಅದರ ಪ್ರಸ್ತಾಪ ಬರುತ್ತದೆ. ಆದ್ದರಿಂದ ಈ ನಾಟಕಕ್ಕೆ 'ಬಿರುಗಾಳಿ'ಯೆಂಬ ಅರ್ಥಪೂರ್ಣವಾಗಿದ್ದು, ಹೆಸರು ಬಹಳ ಚೆನ್ನಾಗಿ ಒಪ್ಪುತ್ತದೆ.

## ೫

## ವಿಧಿವಿಲಾಸ

ಪ್ರಜಾವತ್ಸಲನೂ, ಉದಾತ್ತಚರಿತನೂ, ಧರ್ಮಪರನೂ ಆದ ಭೈರವ ನಾಯಕನಿಗೆ ಈ ಕ್ಲೇಶ ಪರಂಪರೆ ಏಕೆ ಬಂತು? ಅವನನ್ನು ವಿದ್ರೋಹಿಗಳು ಸಿಂಹಾಸನದಿಂದ ತಳ್ಳಿ, ರಾಜ್ಯದಿಂದ ಓಡಿಸಿದಾಗ ಪ್ರಜೆಗಳೇಕೆ ಅವರ ಮೇಲೆ ತಿರುಗಿ ಬೀಳಲಿಲ್ಲ? ಈ ಪ್ರಶ್ನೆಗಳಿಗೆ ನಾಟಕದಲ್ಲಿ ಸಮರ್ಪಕವಾದ ಉತ್ತರ ಸಿಕ್ಕಲಾರದು. ಧರ್ಮಿಷ್ಠರಿಗೆ ದುಃಖವೇಕೆ ಬರಬೇಕು? ಅವರ ಒಳ್ಳೆಯತನವೇ ಒಂದು ಅಪರಾಧವೆ? ಇದಕ್ಕೆ ಹೇಳಬಹುದಾದ ಒಂದೇ ಉತ್ತರ, ಅವನ ಜನ್ಮಾಂತರ ಕರ್ಮಫಲವೆಂಬುದು. ಇದನ್ನೇ ವಿಧಿಯ ವಿಲಾಸವೆಂದೂ ಹೇಳುವುದುಂಟು. ಇದರಲ್ಲಿ 'ವಿಲಾಸ'ವೇನಿದೆಯೋ ತಿಳಿಯದು. ಅಥವಾ ಈ ವಿಧವಾಗಿ ಸಜ್ಜನರನ್ನು ಪೀಡಿಸುವುದೇ ಆ ದುರ್ವಿಧಿಗೆ ಒಂದು ವಿಲಾಸವೋ ಏನೊ! ಭೈರವನಾಯಕ ಅಧ್ಯಯನ ಪರನಾಗಿ, ಗ್ರಂಥ ಕಾಲಕ್ಷೇಪಮಾಡುತ್ತಾ ರಾಜ್ಯಾಡಳಿತದ ಹೊರೆಯನ್ನು ತಮ್ಮನಿಗೆ ವಹಿಸಿದುದೇ ತಪ್ಪಾಯಿತು. ಅರಸನು ಮೈಮರೆಯಬಾರದು. ಅವನು ಸದಾ ಎಚ್ಚೆತ್ತಿರಬೇಕು. ಆಡಳಿತ ರಹಸ್ಯ

ಗಳನ್ನು ಅರಿತುಕೊಂಡ ರುದ್ರನಾಯಕನಲ್ಲಿ ದುರಾಸೆ ಹುಟ್ಟಿತು. ಅವನು ಪ್ರಲೋಭನಕ್ಕೆ ವಶನಾದನು. ಫಲಿತಾಂಶ: ಭೈರವನಾಯಕನಿಗೆ ವನವಾಸ ಪ್ರಾಪ್ತಿ.

ಯಾವ ವಿಧಿ ಭೈರವನಾಯಕನನ್ನು ಈ ರೀತಿಯ ದುಃಖ ಕಷ್ಟಗಳಿಗೆ ಗುರಿ ಮಾಡಿತೋ, ಅದೇ ವಿಧಿ ಅವನನ್ನು ಹನ್ನೆರಡು ವರ್ಷಗಳಷ್ಟು ದೀರ್ಘಕಾಲ ಆ ನಿರ್ಜನ ದ್ವೀಪದಲ್ಲಿ ಸುಖವಾಗಿ ಜೀವಿಸಲು ಸಹಾಯ ಮಾಡಿತು. ಅಷ್ಟೇ ಅಲ್ಲದೆ, ಇಷ್ಟು ಅವಧಿ ಕಳೆದ ಮೇಲೆ ಅವನ ವೈರಿಗಳೆಲ್ಲ ಒಟ್ಟಿಗೆ ಸಿಕ್ಕಿಬೀಳುವ ಹಾಗೆ ಮಾಡಿದೆ ಆ ವಿಧಿ. ಇದು ವಿಧಿಯ ವಿಲಾಸವಲ್ಲದಿದ್ದರೆ ಬೇರೇನು? ಯಾರು ಇವನಲ್ಲಿ ಯಾವ ದಯೆ ದಾಕ್ಷಿಣ್ಯಗಳೂ ಇಲ್ಲದೆ ಮೋಸದಿಂದ ಇವನಿಗೆ ಹಾನಿ ಮಾಡಿದರೋ, ಯಾರು ಇವನನ್ನು ಕೊಲ್ಲಲು ಧೈರ್ಯ ಸಾಲದೆ ಒಂದು ಹರಿಗೋಲಿನಲ್ಲಿ ಕೂಡಿಸಿ ಹೊಳೆಯಲ್ಲಿ ತೇಲಿಬಿಟ್ಟರೋ ಆ ಪಾಪಿಗಳೆಲ್ಲ ಈಗ ಅವನ ಕೈಲಿ ಸಿಕ್ಕಿಬಿದ್ದಿದ್ದಾರೆ. ಹನ್ನೆರಡು ವರ್ಷಗಳ ಕೆಳಗೆ ತಾವೇ ಹೊಳೆಗೆ ತಳ್ಳಿದ ಭೈರವನಾಯಕನು ಇನ್ನೂ ಬದುಕಿರಬಹುದೆಂಬ ಕಲ್ಪನೆಯೇ ಆ ಪಾಪಿಗಳ ಮನಸ್ಸಿನಲ್ಲಿರಲಿಲ್ಲ. ಮಾಡಿದ ಪಾಪದ ಫಲ ಎಷ್ಟು ದಿನ ಕಳೆದರೆ ಮಾತ್ರ ತಪ್ಪಿ ಹೋದೀತು? ಭೈರವನು ಈಗ ಮನಸ್ಸು ಮಾಡಿದ್ದರೆ ಅವರನ್ನೆಲ್ಲ ತೀರಿಸಿ ಬಿಡಬಹುದಾಗಿತ್ತು. ಭೈರವನ ಕೈಲಿ ಆಗದ ಕೆಲಸವೇ ಇಲ್ಲ. ಈ ಸಮಯದಲ್ಲಿ ಅವನ ಮಂತ್ರಬಲ ಪರಿಪೂರ್ಣತೆಯನ್ನು ಹೊಂದಿತ್ತು. ಅವನ ಮಾಯೆಯ ದೇವತೆಗಳೆಲ್ಲ ಅವನು ಹೇಳಿದ ಕೆಲಸ ಮಾಡಲು ಸಿದ್ಧರಾಗಿದ್ದರು. ಆತನೇ ಹೇಳಿರುವಂತೆ "ಇಂದೆನಗೆ ಬಿದಿಯೆ ಶರಣು ಹೊಕ್ಕಂತಿದೆ." ಶತ್ರು ಸಂಹಾರಕ್ಕೆ ಇಷ್ಟೆಲ್ಲ ಸೌಲಭ್ಯಗಳು ಕಲೆತಿದ್ದರೂ ಭೈರವನಾಯಕನಿಗೆ ಸೇಡಿನ ಬಯಕೆಯಾಗಲಿಲ್ಲ. ವಿದ್ರೋಹಿಯಾದ ತನ್ನ ತಮ್ಮ ರುದ್ರನಾಯಕನಿಗೆ ನೆರವು ನೀಡಿದ ನಗರದ ಅರಸ ರಣನಾಯಕನ ಮಗನ ಮೇಲೆ ಅವನಿಗೆ ಅಕ್ಕರೆಯುಂಟಾಯಿತು. ಅವನಿಗೆ ತನ್ನ ಮಗಳು ಗೌರಾಂಬೆಯನ್ನು ಕೊಟ್ಟು ಮದುವೆಮಾಡುವ ಮನಸ್ಸಾಯಿತು. ವಿಧಿಯ ನಿಯಮದಿಂದ ದ್ವೇಷ ಹೋಗಿ ಮಮತೆಯಾಯಿತು. ನಗರದ ಅರಸನಿಗೂ ಕೆಳದಿಯ ನಾಯಕನಿಗೂ ಆ ನಿರ್ಜನವಾದ ನಡುಗಡ್ಡೆಯಲ್ಲಿ ಬಾಂಧವ್ಯವಾಯಿತು. ಬೆಟ್ಟದ ಮೇಲಿನ ನೆಲ್ಲಿಯಕಾಯಿ, ಸಮುದ್ರದೊಳಗಿನ ಉಪ್ಪು—ಎರಡೂ ನಿಮ್ಮ ಮನೆಯ ಮಡಕೆಯಲ್ಲಿ ಸೇರಿ ಉಪ್ಪಿನಕಾಯಿ ಆಗುವಂತೆ! ಇದಲ್ಲವೆ ವಿಧಿಯ ವಿಲಾಸ? ಯಾರು ಎಷ್ಟು ಮಸಲತ್ತುಗಳನ್ನು ನಡೆಸಿ ದ್ವೇಷ ಸಾಧಿಸಿದರೂ ವಿಧಿಯ

ಕೃಪೆಯಿದ್ದರೆ ಏನೂ ಆಗಲಾರದು. ಭೈರವನಾಯಕನನ್ನು ಶಾಶ್ವತವಾಗಿ ತೊಲಗಿಸಿದೆನೆಂದು ತಿಳಿದು ರುದ್ರನಾಯಕ ಹರ್ಷಗೊಂಡಿದ್ದ. ಮನುಷ್ಯ ಯೋಚನೆಯಲ್ಲಿ ಭೈರವನು ಉಳಿಯುವುದು ಸಾಧ್ಯವಿರಲಿಲ್ಲ. ಆದರೆ ದೈವೇಚ್ಛೆಗೆ ಮೀರಿದುದು ಯಾವುದು? ಕೊಲ್ಲುವವನೂ ಬದುಕಿಸುವವನೂ ಭಗವಂತನೇ ಅಲ್ಲವೆ? ಅವನ ಸಂಕಲ್ಪಕ್ಕೆ ವಿರೋಧವಾಗಿ ಮಾನವ ಮಾತ್ರರು ಏನನ್ನು ತಾನೆ ಮಾಡುವುದಕ್ಕಾದೀತು? "ತೇನ ವಿನಾ ತೃಣಾಗ್ರಮಪಿ ನ ಚಲತಿ."

ಕಬ್ಬಿಣದ ಸಹವಾಸದಿಂದ ಬೆಂಕಿಗೂ ಏಟು ಬೀಳುವುದು ಸ್ವಾಭಾವಿಕ. ದುಷ್ಟರ ಸಾನ್ನಿಧ್ಯದಿಂದ ಸಜ್ಜನರಿಗೂ ಕಷ್ಟ ಹಿಂಸೆಗಳು ತಪ್ಪವು. ಪುಣ್ಯಾತ್ಮನಾದ ಜಯದೇವನು ದ್ರೋಹಿಗಳ ಜತೆಯಲ್ಲಿದ್ದನಾದ್ದರಿಂದ ಅವನೂ ನೌಕಾ ಅಪಘಾತದ ಕಷ್ಟಗಳನ್ನು ಅನುಭವಿಸಬೇಕಾಯಿತು. ಹನ್ನೆರಡು ವರ್ಷಗಳ ಹಿಂದೆ ಭೈರವನನ್ನು ರಾಜ್ಯದಿಂದ ಹೊರಡಿಸಿದಾಗ ಜಯದೇವನು ಬಹಳ ಸಂಕಟ ಪಟ್ಟನು. ಆ ನೀಚ ಕೃತ್ಯ ಅವನಿಗೆ ಒಪ್ಪಿಗೆಯಿರಲಿಲ್ಲ. ಆದರೆ ಅವನ ಯತ್ನವೇನಿದೆ? ದ್ರೋಹಿಗಳ ಜಾಲ ಬಲವತ್ತರವಾಗಿತ್ತು. ಅವನು ಒಬ್ಬ ಇಷ್ಟು ಜನರನ್ನು ನಿಗ್ರಹಿಸಲಾಗಲಿಲ್ಲ. ಅನ್ನಪಾನೀಯಗಳನ್ನೂ ವಸ್ತ್ರಗಳನ್ನೂ ಕೆಲವು ಅಮೂಲ್ಯ ವಾದ ಗ್ರಂಥಗಳನ್ನೂ ರಹಸ್ಯವಾಗಿ ದೋಣಿಯಲ್ಲಿಡಿಸುವ ಉಪಕಾರ ಮಾಡಿ ಸಂತುಷ್ಟನಾಗಬೇಕಾಯಿತು! ಆದರೆ ಈ ಸ್ವಲ್ಪವೇ ಭೈರವನಿಗೆ ಮಹೋಪಕಾರ ವಾಯಿತು. ಈ ಗ್ರಂಥಗಳು ಅವನ ಪಾಲಿಗೆ ಕೆಳದಿಗಿಂತಲೂ ಹೆಚ್ಚು ಬೆಲೆ ಬಾಳತಕ್ಕವಾಗಿದ್ದುವು. ಆ ಮಂತ್ರಶಾಸ್ತ್ರದ ಸಹಾಯದಿಂದಲೇ ಭೈರವನು ನಿರ್ಮಾನುಷವಾದ ಆ ಅದ್ಭುತ ಮಾಯಾದ್ವೀಪದಲ್ಲಿ ಬಾಳಿ ಬದುಕಲು ಸಾಧ್ಯ ವಾಯಿತು. ಆ ಮಂತ್ರಶಕ್ತಿಯೇ ಕೊನೆಗೆ ತನ್ನ ಶತ್ರುಗಳಿಗೆ ಬುದ್ಧಿಕಲಿಸಲು ಅವನಿಗೆ ಸಾಧನವಾಯಿತು! ದುರ್ಬಲನನ್ನು ವಿಧಿ ಬಲಶಾಲಿಯನ್ನಾಗಿಸಿತು. ರಾಜದರ್ಪದಿಂದ ಹಿಗ್ಗುತ್ತಿದ್ದ ರುದ್ರನಾಯಕ ರಣನಾಯಕರು ವಿಧಿವಶದಿಂದ ಕೇವಲ ಅಸಹಾಯರಾಗಿ ಹಿಂದೆ ತಮ್ಮ ಮೋಸಕ್ಕೆ ಬಲಿಬಿದ್ದು ಸಂಕಟಪಟ್ಟ ಭೈರವನಾಯಕನ ಕೃಪಾಭಿಕ್ಷೆ ಬೇಡಬೇಕಾಯಿತು! ನಿರಪರಾಧಿಯನ್ನು ಆ ದುಷ್ಟರು ಹಿಂದೆ ಹಿಂಸೆಗೀಡುಮಾಡಿದ್ದರು. ಈಗ ಆ ದೈವೀ ಸ್ವಭಾವದ ನಾಯಕ ತನ್ನ ಉದಾತ್ತ ಗುಣವನ್ನು ಮೆರೆದು ಈ ಮಹಾ ಅಪರಾಧಿಗಳನ್ನು ಕ್ಷಮಿಸಿದನು. ದೈವೀ ಸ್ವಭಾವದ ಈ ಧೀರೋದಾತ್ತನ ಉದಾರ ವರ್ತನೆಯಿಂದ ನೀಚರು ಸಜ್ಜನರಾದರು. 'ಮರುಳಾಗಿರ್ದ ನಾವೆಲ್ಲರುಂ ಮರಳಿ ತಿಳಿ ಮನ

ಹೊಂದಿ ಮನುಜರಾಗಿಹೆವು" ಎಂದು ಕೊನೆಯಲ್ಲಿ ಜಯದೇವ ಮಂತ್ರಿ ಹೇಳಿರುವ ಮಾತು ಬಹಳ ಸ್ವಾರಸ್ಯವಾಗಿದೆ. ರಾಜ್ಯ ಮೋಹವು ಮರುಳು ಅಮರಿದಂತೆ ರುದ್ರನಾಯಕ ಮತ್ತು ಅವನ ಮಿತ್ರರಿಗೆ ಅಡರಿಕೊಂಡಿತ್ತು. ಈ ದ್ವೀಪದಲ್ಲಿ ಅವರು ಕಂಡುಂಡ ಸಿಹಿಕಹಿಗಳ ದೆಸೆಯಿಂದ ಅವರ ಮನಸ್ಸು ಶುದ್ಧವಾಯಿತು. ಪಶ್ಚಾತ್ತಾಪದಿಂದ ಅವರು ನಿಷ್ಪಾಪರಾದರು! ಬಂಧು ದ್ರೋಹದ ಬಿರುಗಾಳಿ ಅಡಗಿ ಶಾಂತವಾಯಿತು. ಭೈರವನಾಯಕನು ತನ್ನ ಶತ್ರುಗಳನ್ನು ಕೊಲ್ಲದೆ, ಅವರನ್ನು ಯಾವ ಸಂಕಟಕ್ಕೂ ಗುರಿಮಾಡದೆ, ಅವರನ್ನು ಉಪಾಯದಿಂದ ತಿದ್ದಿ ಅವರ ಹೃದಯದೊಳಗಿನ ದ್ವೇಷಾಂಕುರವನ್ನು ನಿರ್ಮೂಲನ ಮಾಡಿ, ಅವರ ಒಲವನ್ನು ಸಂಪಾದಿಸಿ ತನ್ನ ನೈತಿಕ ವಿಜಯವನ್ನು ಸ್ಥಾಪಿಸಿದನು. ವಿಧಿಯು ತನ್ನ ಬಳಿಗೆ ಎಳೆದು ತಂದ ಆ ಜನರನ್ನು ವಿಧಿಯ ಹಾಗೆಯೇ ದುರೂಹ್ಯವಾದ ಮಾರ್ಗಗಳಿಂದ ಅವರನ್ನು ಪಳಗಿಸಿ, ಅವರ ಮನಸ್ಸು ಹದವಾದ ಸಮಯವನ್ನರಿತು ಅವರನ್ನು ಆದರಿಸಿದ. ಈ ರೀತಿ ನಾಟಕದಲ್ಲಿ ಹೆಜ್ಜೆಹೆಜ್ಜೆಗೂ ವಿಧಿಯ ಕೈವಾಡ ಕಾಣುತ್ತದೆ.

## ೬
## ವಸ್ತುರಚನೆ

ಇಂಗ್ಲೀಷಿನ ಟೆಂಪೆಸ್ಟ್ ನಾಟಕ ಕ್ರಮವಾಗಿ ಬಿರುಗಾಳಿಯ ದೃಶ್ಯದಿಂದಲೇ ಆರಂಭವಾಗುತ್ತದೆ. ಗಾಳಿಯ ಹೊಡೆತಕ್ಕೆ ಸಿಕ್ಕಿ ತೊಳಲಾಡುತ್ತಿದ್ದ ನಾವಿಕರ ಪರದಾಟ ಅಲ್ಲಿನ ವಿಷಯ. ಆದರೆ ನಮ್ಮ ಕನ್ನಡ ನಾಟಕದಲ್ಲಿ ಹಾಗಿಲ್ಲ. ಇಲ್ಲಿ ನಾಟಕ ಆರಂಭವಾಗುವ ಮೊದಲೇ ಬಿರುಗಾಳಿ. ಅದರ ಪ್ರಭಾವದ ವರ್ಣನೆ ಮೊದಲ ದೃಶ್ಯದ ವಿಷಯ. ಮುಳುಗಿದ ದೋಣಿಯೊಳಗಿದ್ದ ಇಬ್ಬರು ಪರಸ್ಪರ ಭೇಟಿ ಮಾಡಿ ನಗರದ ಅರಸು ರಣನಾಯಕನೇ ಮುಂತಾದವರು ದೋಣಿಯಲ್ಲಿ ವಿಹಾರಕ್ಕೆ ಬಂದು 'ನೀರ್ಮಸಣ'ಕ್ಕೆ ಸಿಕ್ಕಿದರೆಂದು ಹೇಳಿಕೊಂಡು ಪೇಚಾಡುತ್ತಾರೆ. ಇವರ ಸಂಭಾಷಣೆ ನಾಟಕಕ್ಕೆ ಒಂದು ಪ್ರಸ್ತಾವನೆಯಂತೆ ಇದೆ. ಮುಂದೆ ಭೈರವ ಗೌರಾಂಬೆಯರ ಒಂದು ಸಂಭಾಷಣೆಯಲ್ಲಿ ನಮಗೆ ಹನ್ನೆರಡು ವರ್ಷಗಳ ಹಿಂದಿನ ವೃತ್ತಾಂತವೆಲ್ಲ ತಿಳಿಯುತ್ತದೆ. ಆ ಹಿಂದಿನ ಘಟನಾವಳಿಗೂ ಈಗ್ಗೆ ಬಿರುಗಾಳಿಗೂ ಇರುವ ಸೂಕ್ಷ್ಮ ಸಂಬಂಧ ಓದುಗರಿಗೆ ಅರಿವಾಗುತ್ತದೆ. ಈ ಕ್ರೂರವಾದ ಬಿರುಗಾಳಿ ತಾನು ಪ್ರಕೃತಿಯ ಕೃತ್ಯವಾಗಿರದೆ ಭೈರವನಾಯಕನು ಯಾವುದೋ ಸದುದ್ದೇಶದಿಂದ, ಒಂದು ದೊಡ್ಡ ಕಾರ್ಯ ಸಾಧನೆಗಾಗಿ, ತನ್ನ ಮಂತ್ರಶಕ್ತಿ

ಯಿಂದ ಸೃಷ್ಟಿಸಿದ ಒಂದು ಮಾಯೆಯೆಂದು ತಿಳಿದು ಓದುಗರಿಗೆ ಕೊಂಚ ಸಮಾಧಾನವಾಗುತ್ತದೆ. ಈ ಕಥೆ ದುರಂತ ದುಃಖದ ಪ್ರಸ್ತಾಪದಿಂದ ಕೂಡಿದ್ದರೂ ಪರಿಣಾಮ ರಮಣೀಯವಾಗಿರಬಹುದೆಂಬ ಕಲ್ಪನೆ ತೋರುತ್ತದೆ.

ನಾಟಕದ ಇನ್ನುಳಿದ ಭಾಗದಲ್ಲಿ ಭೈರವ ಕಿನ್ನರರಿಬ್ಬರ ಹೊರತು ಉಳಿದವರಾರಿಗೂ ಇದು ಹೇಗೆ ಪರಿಣಾಮವಾಗಬಹುದೆಂಬ ಅರಿವಿಲ್ಲದೆ ಥಾವಂತ ಪಡುತ್ತಿರುತ್ತಾರೆ. ರಣನಾಯಕನಿಗೆ ತನ್ನ ಮಗ ಬದುಕಿರಬಹುದೆಂಬ ಆಸೆಯಿಲ್ಲ–ಭರವಸೆಯಿಲ್ಲ. ಅವನು ಪುತ್ರದುಃಖಿಯಾಗಿ ಹುಯ್ಯಲಿಡುತ್ತಿರುತ್ತಾನೆ. "ಯಾವ ಜೀವನ ಸೌಲಭ್ಯವೂ ಇಲ್ಲದ ಈ ನಿರ್ಮಾನುಷವಾದ ಸ್ಥಳದಲ್ಲಿ ಬಂದು ಬಿದ್ದೆವಲ್ಲ" ಎಂದು ಉಳಿದ ಜನ ದುಃಖಿಗಳಾಗಿದ್ದಾರೆ. ಯುವರಾಜ ಶಿವನಾಯಕನಾದರೋ ತನ್ನ ಜತೆಯಲ್ಲಿದ್ದವರೆಲ್ಲ ಮುಳುಗಿ ಸತ್ತರೆಂದೇ ನಂಬಿ ಸಂಕಟಪಟ್ಟು ಕಿಂಕರ್ತವ್ಯತಾ ಮೂಢನಾಗಿ ದ್ವೀಪದಲ್ಲೆಲ್ಲ ಅಲೆದು ಗೋಳಿಡುತ್ತಿರುವಾಗ ಗೌರಾಂಬೆಯ ದರ್ಶನವಾಗಿ ಮಿಕ್ಕೆಲ್ಲ ವಿಷಯಗಳನ್ನೂ ಮರೆತು ಅವಳ ಪ್ರಣಯದಲ್ಲಿ ಮಗ್ನನಾಗುತ್ತಾನೆ. ಗೌರಾಂಬೆ ಈ ಹೊಸ ಯುವಾ ಪುರುಷನನ್ನು ಕಂಡು ಅವನ ಸೌಂದರ್ಯಕ್ಕೆ ಮೋಹಿಸಿ ಅವನ ಪರಿಚಯ ಹೆಚ್ಚಿದಂತೆಲ್ಲ ಅವನ ಗುಣಾತಿಶಯವನ್ನು ಮೆಚ್ಚಿ ಅವನಿಗೆ ಒಲಿಯುತ್ತಾಳೆ. ತನ್ನ ತಂದೆ ಈ ತನ್ನ ಇನಿಯನನ್ನು ಕ್ರೌರ್ಯದಿಂದ ನಡೆಸಿಕೊಳ್ಳುವುದನ್ನು ಕಂಡು ಅವಳಿಗೆ ಬೇಸರ. ಅವನ ಅಂತರಂಗ ಅವಳಿಗೂ ಪೂರ್ಣವಾಗಿ ತಿಳಿಯದು. ಹೀಗೆ ಒಬ್ಬೊಬ್ಬರು ಒಂದೊಂದು ಬಗೆಯ ದುಃಖ ಸಂಕಟ ಯೋಚನೆಗಳಿಗೆ ಸಿಕ್ಕು ಬಿದ್ದಿರುತ್ತಾರೆ.

ದ್ವೀಪದ ಇನ್ನೊಂದೆಡೆ ಶನಿಯ ಭೀಮಣ ತ್ರಿಶಂಕುಗಳೆಂಬ ತ್ರಿಮೂರ್ತಿಗಳು ಭೈರವನ ಕೊಲೆಗೆ ಹವಣಿಸುತ್ತಿದ್ದರೆ ನಗರದ ರಂಗನಾಯಕ ಕೆಳದಿಯ ರುದ್ರನಾಯಕರು ಮುದುಕನಾದ ರಣನಾಯಕನ ಕೊಲೆಗೆ ಮನಸ್ಸು ಮಾಡುತ್ತಾರೆ. ಈ ಎಲ್ಲ ಸಂಗತಿಗಳನ್ನೂ ಭೈರವನಾಯಕನು ತನ್ನ ಮಂತ್ರಶಕ್ತಿಯಿಂದ ಅರಿತು, ಕಿನ್ನರನೆಂಬ ಮಹಾ ಮಾಯಾವಿಯಾದ ದೇವ ಕಿಂಕರನ ಸಹಾಯದಿಂದ ಎಲ್ಲ ಮಸಲತ್ತುಗಳನ್ನೂ ಭಂಗಪಡಿಸಿ, ತನ್ನ ಇಷ್ಟಾರ್ಥ ಸಾಧಿಸಿಕೊಳ್ಳುತ್ತಾನೆ.

ಇಷ್ಟೆಲ್ಲ ಕಥೆ ಒಂದು ದಿನದಲ್ಲಿ ನಡೆದು ಹೋಗುತ್ತದೆ. ನಾಟಕದ ಕಥೆಯ ಕಾಲ ನಾಲ್ಕೈದು ಗಂಟೆಗಳಷ್ಟು ಮಾತ್ರ. ಕಥೆಯೆಲ್ಲ ಆ ದ್ವೀಪದಲ್ಲಿ—ಒಂದೇ ಸ್ಥಳದಲ್ಲಿ ನಡೆಯುತ್ತದೆ. ಇಷ್ಟು ಕೊಂಚ ಕಾಲದಲ್ಲಿ ಪ್ರೇಕ್ಷಕರಿಗೆ ಅನೇಕ ಘಟನೆಗಳು ಕಾಣುತ್ತವೆ; ಭಿನ್ನ ಸ್ವಭಾವಗಳ ವ್ಯಕ್ತಿಗಳು ಕಾಣುತ್ತಾರೆ. ಶನಿಯನಂಥ

ಕುರೂಪಿ, ಕುತ್ಸಿತ, ಮತ್ಸರಗ್ರಸ್ತನೂ, ಭೈರವನಂಥ ಧೀರ ಗಂಭೀರ ಸ್ವಭಾವದ ಉದಾತ್ತ ವ್ಯಕ್ತಿಯೂ ಈ ನಾಟಕದಲ್ಲಿದ್ದಾರೆ. ಧರ್ಮಪರನೂ ರಾಜಭಕ್ತನೂ ಆದ ಜಯದೇವ, ಸದಾ ದ್ರೋಹ ಚಿಂತನೆಯಲ್ಲಿಯೇ ಇರುವ ರುದ್ರನಾಯಕ,— ಹೀಗೆ ತೀರ ವಿರುದ್ಧ ಲಕ್ಷಣಗಳ ಪಾತ್ರಗಳಿವೆ ಈ ನಾಟಕದಲ್ಲಿ. ಅನಿರೀಕ್ಷಿತವಾದ ವಿಪತ್ತು ಇದ್ದಕ್ಕಿದ್ದಂತೆ ಬಂದೊದಗುವ ಹಾಗೆಯೇ ಈ ಕಥೆಯಲ್ಲಿ ಸುಖಸಂತೋಷ ಗಳೂ ಅಷ್ಟೇ ಅನಿರೀಕ್ಷಿತವಾಗಿ ಬರುತ್ತವೆ. ಅಂತು 'ಬಿರುಗಾಳಿ' ಅದ್ಭುತ–ಸಾಮಾನ್ಯ, ನೀಚ–ಉದಾತ್ತ, ಸಾತ್ವಿಕ–ತಾಮಸ, ಪರಸ್ಪರ ತೀರ ವಿರುದ್ಧವಾದ ಸ್ವಭಾವಗಳನ್ನು ಪ್ರತಿಬಿಂಬಿಸಿ ಓದುಗರ ಹೃದಯಗಳನ್ನು ಹಿಡಿದಿಟ್ಟುಕೊಳ್ಳುತ್ತದೆ. ಚಿಕ್ಕ ಚಿತ್ರದಲ್ಲಿ ವಿಶಾಲ ಗಗನವನ್ನೇ ಹಿಡಿದಿಡುವ ಕುಶಲಿ ಚಿತ್ರಕಾರನಂತೆ ಸಣ್ಣ ರೂಪಕದಲ್ಲಿ ಮಾನವ ಹೃದಯಾಕಾಶಗಳಲ್ಲಿ ಮೂಡಿ ಮುಳುಗುವ ಅನೇಕಾನೇಕ ಸಂಕಲ್ಪ ವಿಕಲ್ಪಗಳನ್ನು ಚಿತ್ರಿಸಿ, ಕುವೆಂಪುರವರು ಯಶಸ್ವಿಗಳಾಗಿದ್ದಾರೆ. ಈ ನಾಟಕದ ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು.

## ೭

## ವ್ಯಕ್ತಿಚಿತ್ರಣ

### ಧೀರೋದಾತ್ತನಾಯಕ

'ಬಿರುಗಾಳಿ'ಯ ಅತ್ಯಂತ ಪ್ರಧಾನಪಾತ್ರ ಕೆಳದಿಯ ಭೈರವನಾಯಕ. ಈತನ ಇಚ್ಛೆಯಿಂದಲೇ ಬಿರುಗಾಳಿಯೆದ್ದಿತು. ಮತ್ತು ಈತನ ದಯೆಯಿಂದಲೇ ಬಿರುಗಾಳಿಗೆ ಬಲಿಯಾದವರೆಲ್ಲ ಅಕ್ಷತರಾಗಿ ಬದುಕಿ ಬಂದರು. ಭೈರವನಾಯಕನು ಈ ದ್ವೀಪದಲ್ಲಿ "ಭಯಕೃತ್ ಭಯನಿವಾರಣ" ನೆನಿಸಿದ್ದಾನೆ. ಅಲ್ಲಿನ ಸಮಸ್ತ ಅತಿಮಾನುಷ ಶಕ್ತಿಗಳೂ ನಾಯಕನ ಕಿಂಕರರು. ಭೈರವನು ಇಚ್ಛಾಮಾತ್ರ ದಿಂದ ಬೇಕುಬೇಕಾದ ಕೆಲಸಗಳನ್ನು ಸಾಧಿಸಬಲ್ಲವನು. ಆ ದ್ವೀಪದಲ್ಲಿ ಅವನಿಗೆ ಎದುರಿಲ್ಲ. ಇಷ್ಟು ಮಹಿಮೆ ಅವನಿಗೆ ಲಭಿಸಿದ್ದು ಅವನ ಮಂತ್ರಬಲದಿಂದ. ಹಲವು ವರ್ಷಗಳ ಕಾಲ ಕೆಳದಿಯಲ್ಲಿ ರಾಜ್ಯಭಾರವನ್ನು ಬದಿಗೊತ್ತಿ ಸಾಧಿಸಿದ ಮಂತ್ರಶಾಸ್ತ್ರ ಅವನಿಗೆ ಈ ದ್ವೀಪದಲ್ಲಿ ಅದ್ಭುತ ಶಕ್ತಿಯನ್ನು ಗಳಿಸಿಕೊಟ್ಟಿದೆ.

ಭಾಗ್ಯವಂತರಿಗೆ ಹೋದ ಕಡೆಯಲ್ಲೆಲ್ಲ ಪರಿವಾರ ಲಭಿಸುತ್ತದೆ. ಅರಸನಾಗಿದ್ದ ಭೈರವನಾಯಕ ದುರ್ದೈವದಿಂದ ರಾಜ್ಯಭ್ರಷ್ಟನಾದರೂ ಅವನ ಪೂರ್ವ ಪುಣ್ಯ ದಿಂದ, ಈಶ್ವರನ ಕೃಪೆಯಿಂದ ಈ ದ್ವೀಪವನ್ನು ಸೇರಿ ಇಲ್ಲಿ ತನ್ನ ಮಂತ್ರಮಹಿಮೆ

ಯಿಂದ ಅನೇಕ ಅತಿಮಾನುಷ ಶಕ್ತಿಗಳನ್ನು ಸ್ವಾಧೀನಪಡಿಸಿಕೊಂಡನು. ಅವನಿಗಿಂತ ಮುಂಚೆ ಆ ದ್ವೀಪದಲ್ಲಿದ್ದ ಒಂದು ಮಂತ್ರವಾದಿನಿಯು ಮಹಾ ಸ್ವಾತಂತ್ರ್ಯ ಪ್ರೇಮಿಯಾದ ಒಬ್ಬ ಮಹಾಸುಂದರ ಕಿನ್ನರನನ್ನು ಒಂದು ಮರದಲ್ಲಿ ಸೆರೆ ಹಾಕಿ ತಾನು ಸತ್ತು ಹೋಗಿದ್ದಳು. ಮಂತ್ರವಾದಿನಿ ಸತ್ತರೂ ಮಂತ್ರ ಮಹಿಮೆ ಸಾಯಲಿಲ್ಲ; ಕಿನ್ನರನ ಪರಾಧೀನತೆ ತಪ್ಪಲಿಲ್ಲ. ಅವನು ನಿರ್ಬಂಧದಲ್ಲಿ ಸಿಕ್ಕಿ ನರಳುತ್ತಿರುವಾಗ ಅಲ್ಲಿಗೆ ಬಂದ ಭೈರವನಾಯಕನು ಅವನನ್ನು ಈ ಕಡು ಕಷ್ಟದಿಂದ ಬಿಡುಗಡೆ ಮಾಡಿದನು. ಈ ಮಹೋಪಕಾರಕ್ಕೆ ಸಂತೋಷಿಸಿ ಆ ಕಿನ್ನರ ಭೈರವನಾಯಕನಿಗೆ ಪ್ರಿಯಭಕ್ತನಾಗಿ ಅವನ ಕೈಂಕರ್ಯವನ್ನು ಮನ ಮುಟ್ಟಿ ಮಾಡುತ್ತಿದ್ದನು. ಅವನ ಅನುಚರರೂ ಸಂಗಡಿಗರೂ ಆದಂಥ ಇತರ ಕಿನ್ನರ ಕಿಂಪುರುಷಾದಿಗಳೂ ಭೈರವನಾಯಕನ ಮಂತ್ರಶಕ್ತಿಯನ್ನೂ ಸೌಜನ್ಯ ವನ್ನೂ ಕಂಡು ಮೆಚ್ಚಿ ಮಾರುಹೋಗಿ ಅವನ ಆಜ್ಞಾಧೀನರಾಗಿ ನಡೆದುಕೊಳ್ಳು ತ್ತಿದ್ದರು. ಇದರಿಂದ ಏಕಾಕಿಯಾದ ಭೈರವನು ಆ ನಿರ್ಮಾನುಷ ದ್ವೀಪದಲ್ಲಿ ತನ್ನ ಪುಟ್ಟ ಮಗಳನ್ನು ಸಾಕುತ್ತ ಹನ್ನೆರಡು ವರ್ಷಗಳ ಕಾಲ ಸುಖ ಶಾಂತಿ ಗಳಿಂದ ಬದುಕಲು ಸಮರ್ಥನಾದನು.

ಕಿನ್ನರನಂಥ ಅತಿಮಾನುಷ ಶಕ್ತಿಗಳೇ ಅಲ್ಲದೆ ಶನಿಯನೆಂಬ ಒಬ್ಬ ಅರ್ಧ ಮಾನುಷನೂ ಭೈರವನ ಕಿಂಕರನಾಗಿ ಅವನ ಮನೆಗೆ ಸೌದೆ ನೀರುಗಳನ್ನೊದಗಿ ಸುತ್ತ, ಕೀಳ್ಗೆಲಸದ ಸೇವಕನಾಗಿದ್ದಾನೆ. ಇವನಿಗೆ ನಾಯಕನು ಎಷ್ಟೋ ತಿಳಿವು ನೀಡಿದ್ದಾನೆ; ಭಾಷೆಯನ್ನೂ ಕಲಿಸಿದ್ದಾನೆ. ಆದರೆ ಶನಿಯನಿಗೆ ನಾಯಕನ ಮೇಲೆ ಭಕ್ತಿಯಿಲ್ಲ. ಅವನಿಗೆ ಭೈರವನ ಮೇಲೆ ಬಹಳ ಕ್ರೋಧ. ತನ್ನ ತಾಯಿಯ ರಾಜ್ಯವಾಗಿದ್ದು ನ್ಯಾಯವಾಗಿ ತನ್ನದಾಗಬೇಕಾಗಿದ್ದ ಈ ದ್ವೀಪವನ್ನು ಭೈರವನಾಯಕನು ಅನ್ಯಾಯವಾಗಿ ಆಕ್ರಮಿಸಿಕೊಂಡಿದ್ದಾನೆಂದು ಅವನಿಗೆ ಮತ್ಸರ. ಆದರೆ ಅವನು ಭೈರವನ ಶಕ್ತಿಗೆ ಸೋತು ವಿಧಿಯಿಲ್ಲದೆ ಅವನಿಗೆ ಆಳಾಗಿದ್ದಾನೆಯೇ ಹೊರತು ಪ್ರೀತಿಯಿಂದಲ್ಲ; ಆದರೆ ಭೈರವನಾಯಕ ಇವನ ಅಲ್ಪತೆಯನ್ನು ಗಮನಿಸದೆ ಇರುತ್ತಾನೆ.

ಒಂದು ರಾಜ್ಯಕ್ಕೆ ಅರಸನಾಗಿದ್ದು, ಧರ್ಮಸಮ್ಮತವಾದ ಆಳ್ವಿಕೆಯಿಂದ ತನ್ನ ಪ್ರಜೆಗಳ ಭಕ್ತಿ ಪ್ರೀತಿಗಳನ್ನೂ ಸಂಪಾದಿಸಿಕೊಂಡು ಪೂಜ್ಯನಾಗಿದ್ದ ಭೈರವ ನಾಯಕನು ಎಷ್ಟೇ ಏಕಾಂತ ಪ್ರೇಮಿಯಾಗಿದ್ದರೂ ಈ ಅಜ್ಞಾತವಾದ ನಿರ್ಜನ ದ್ವೀಪದಲ್ಲಿ ಶನಿಯನಂಥವನ ಕೈಲಿ ಬಲವಂತದಿಂದ ಸೇವೆ ತೆಗೆದುಕೊಂಡು ಅವನ

ದುರ್ಭಾಷೆಗಳನ್ನು ಕೇಳುತ್ತ ಹೊತ್ತುಗಳೆಯುವುದು ಎಷ್ಟು ಕಷ್ಟವಾಗಿರಬಹುದು. ನಾಯಕನು ತನ್ನ ಹೃದಯವೇದನೆಯನ್ನು ಹೇಳಿಕೊಳ್ಳಬಹುದಾದಂಥ ಒಬ್ಬ ಗೆಳೆಯನೂ ಇಲ್ಲದೆ ಹನ್ನೆರಡು ವರ್ಷಗಳ ಕಾಲ ನಿರ್ಬಂಧವಾದ ಏಕಾಂತವಾಸಕ್ಕೆ ಎಷ್ಟು ನೊಂದುಕೊಂಡಿರಬಹುದು! ತನಗಿಂತ ಹೆಚ್ಚಾಗಿ ತನ್ನ ಚಿಕ್ಕ ಮಗಳು ನಾಗರಿಕ ಜೀವನವನ್ನೇ ಅರಿಯದೆ, ಜತೆಗಾತಿಯರಿಲ್ಲದೆ ಹೊತ್ತು ಕಳೆಯಬೇಕಾದ ದುಸ್ಥಿತಿಯನ್ನು ಕಂಡು ತಂದೆಯ ಮನಸ್ಸು ಮರುಗದೆ ಇದ್ದಿರಬಹುದೆ? ಇಷ್ಟೆಲ್ಲ ಸಂಕಟಗಳಿಗೆ ಮೂಲಕಾರಣನಾದ ತನ್ನ ದ್ರೋಹಿ ತಮ್ಮ ರುದ್ರನಾಯಕನ ನೆನಪು ಅವನ ಮನಸ್ಸಿನಲ್ಲಿ ಕ್ರೋಧಾಗ್ನಿಯನ್ನು ಹೊತ್ತಿಸದೆ ಇರಲು ಶಕ್ಯವೆ? ಜೀವನದ ಸಿಹಿ ಕಹಿಗಳನ್ನೆಲ್ಲ ಕಂಡುಂಡು ಬೇಸತ್ತ ತನಗಾಗಿ ಅಲ್ಲದಿದ್ದರೂ ಇನ್ನೂ ಬದುಕಿ ಬಾಳಬೇಕಾದ ತನ್ನ ಮಗಳಿಗಾಗಿಯಾದರೂ ಭೈರವನಾಯಕನು ಕೆಳದಿಗೆ ಹಿಂತಿರುಗಲು ಬಯಸಿದ್ದರೆ ಅದು ಅಸಹಜವಲ್ಲ. "ಕೆಳದಿಗಿಂತಲೂ ನನಗೆ ಮಿಗಿಲಾದ ಬೆಲೆಯುಳ್ಳ ಕೃತಿ"ಗಳೆಂದು ಮಂತ್ರಶಾಸ್ತ್ರ ಗ್ರಂಥಗಳನ್ನು ಕುರಿತು ನಾಯಕನು ಹೇಳಿಕೊಂಡ ಮಾತ್ರಕ್ಕೇ ಕೆಳದಿ ಅವನ ದೃಷ್ಟಿಯಲ್ಲಿ ಬೆಲೆಯಿಲ್ಲದ ವಸ್ತುವಾಗಿತ್ತೆಂದು ತಿಳಿಯಬಾರದು. ತಾನು ಬಿಟ್ಟು ಬಂದ ರಾಜ್ಯವೆಂದು ಅವನು ಕೆಳದಿಯ ಮೇಲೆ ಔದಾಸೀನ್ಯವನ್ನು ತಾಳಲಿಲ್ಲ. ತನ್ನ ತಮ್ಮ ರುದ್ರನಾಯಕನು ದೂರದೃಷ್ಟಿಯಿಲ್ಲದೆ ತನಗೆ ಅನ್ಯಾಯ ಮಾಡುವುದಕ್ಕಾಗಿ ಕೆಳದಿಯ ಸ್ವಾತಂತ್ರ್ಯವನ್ನು ಮಾರಿಬಿಟ್ಟುದನ್ನು ನೆನಸಿಕೊಂಡರೆ ಅವನಿಗೆ ಸಂಕಟವಾಗುತ್ತಿತ್ತು. ಅವನ ದೇಶಾಭಿಮಾನ ಹಿರಿದು.

ತಮ್ಮನು ತನಗೆ ಮಾಡಿದ ಘೋರ ದ್ರೋಹವನ್ನು ಸ್ಮರಿಸಿಕೊಂಡರೆ ಭೈರವನ ಮನಸ್ಸಿನಲ್ಲಿ ಉರಿಯೇಳುತ್ತಿತ್ತು. ತನ್ನ ಮಗಳಿಗೆ ಈ ಕಥೆಯನ್ನು ಹೇಳಹೇಳುತ್ತ "ಚಿಕ್ಕಪ್ಪನೆಸಗಿದುದು ಧರ್ಮವೆ? ವಿಚಾರಿಸು! ಅವನೆನಗೆ ಸೋದರನೆ?" ಎಂದು ನೊಂದು ನುಡಿಯುವನು. ಆದ್ದರಿಂದ ಹನ್ನೆರಡು ವರ್ಷಗಳ ದೀರ್ಘವಾದ ಅಜ್ಞಾತವಾಸದಲ್ಲಿ ಭೈರವನಾಯಕನು ತನ್ನವರೇ ತನಗೆ ದ್ರೋಹ ಮಾಡಿದುದನ್ನು ನೆನೆನೆನೆದು ಕುದಿಯುತ್ತಿದ್ದನೆಂದು ಭಾವಿಸಬಹುದು. ಇದು ಸಹಜ. ಆದರೆ ಅಂಥಾ ಪರಮ ವೈರಿ ತನ್ನ ಕೈಗೆ ಸಿಕ್ಕಿದಾಗ ಭೈರವ ಸೇಡು ತೀರಿಸಿಕೊಳ್ಳಬಯಸದೆ, ಅವನನ್ನು ಕೊಲ್ಲದೆ, ಕಾಪಾಡಿದುದೇ ಅಲ್ಲದೆ ಅವನನ್ನು ಕ್ಷಮಿಸಿ ಅಭಯ ಪ್ರದಾನ ಮಾಡಿದುದು ಬಹಳ ದೊಡ್ಡ ಸಂಗತಿ.

ಅಪಕಾರಿಗೆ ಉಪಕಾರ ಮಾಡುವ ಈ ಜಗದ್ವಿಪರೀತವಾದ ವರ್ತನೆ ಕೊಂಡಾಡ ತಕ್ಕದ್ದೇ ಸರಿ. ಇಂಥಾ ಉದಾತ್ತತೆ ಲೋಕೋತ್ತರವಾದುದು.

ಉದಾತ್ತ ಪುರುಷರಿಗೆ ನೀಚ ಕಲ್ಪನೆಗಳು ಹುಟ್ಟುವುದು ಬಹಳ ಅಪರೂಪ. ಕೆಲವು ವೇಳೆ ಅವರಲ್ಲಿ ಕೋಪಾವೇಶವುಂಟಾದರೂ ಅದು ಮಿಂಚು ಮಿಂಚಿದಂತೆ ಕಂಡು ಕಣ್ಮರೆಯಾಗುವುದು. ಮಹಾತ್ಮರು ಯಾವಾಗಲೂ ಕ್ಷಣಕೋಪಿಗಳು. ಭೈರವನಾಯಕನಿಗಾದರೂ ತನ್ನ ವೈರಿಗಳು ಕಣ್ಣಿಗೆ ಬಿದ್ದಾಗ ಮೊದಲು ಬಂದದ್ದು ಸೇಡಿನ ಯೋಚನೆ. "ಅಮೃತಗಳಿಗೆಯನೇಕೆ ಬಿಡಲೆಂದು ಬಗೆದು ಮಂತ್ರ ಶಕ್ತಿಯ ಬಲದ ಬಿರುಗಾಳಿಯೆಬ್ಬಿಸಿದೆ" ಎಂದು ಅವನೇ ಹೇಳಿಕೊಂಡಿದ್ದಾನೆ. ಆದರೆ ಆ ಸೇಡಿನ ಬಯಕೆ ಅವನ ಮನಸ್ಸಿನಲ್ಲಿ ಬಹಳ ಹೊತ್ತು ಉಳಿಯಲಿಲ್ಲ. ಅದು ಉತ್ಪತ್ತಿಯಾಗುತ್ತಿದ್ದ ಹಾಗೆಯೇ ವಿಲೀನವೂ ಆಗಿಹೋಯಿತು. "ಮುಯ್ಗೆ ಮುಯ್ಯಂ ತೀರ್ಚಿಕೊಳ್ವುದದು ಜಸಮಲ್ತು."

"ದಂಡನೆ ದೊಡ್ಡವರ ಕಾರ್ಯವಾಗದು; ಕ್ಷಮೆಯೆ ಪುಣ್ಯಾತ್ಮರಿಗೆ ಪಿರಿಯ ಪೊಂದೊಡಿಗೆ...."

ಎಂದು ಯೋಚಿಸಿ ಭೈರವನಾಯಕನು ತನ್ನ ಕೈಗೆ ಸಿಕ್ಕಿದ ಹಗೆಗಳನ್ನು ತಾನೇ ಎಬ್ಬಿಸಿದ ಬಿರುಗಾಳಿಯಿಂದ ರಕ್ಷಿಸಿ ಉದ್ಧಾರ ಮಾಡಿದನು.

ಅಷ್ಟೇ ಅಲ್ಲ. ತನ್ನನ್ನು ರಾಜ್ಯಚ್ಯುತನಾಗಿ ಮಾಡಲು ತನ್ನ ತಮ್ಮನಿಗೆ ನೆರವು ನೀಡಿದ ವೈರಿ ರಣನಾಯಕನ ಮಗನಿಗೆ ತನ್ನ ಮುದ್ದು ಕುವರಿಯನ್ನು–ಒಬ್ಬಳೇ ಮಗಳನ್ನು ಕೊಟ್ಟು ಮದುವೆ ಮಾಡಿದನು! ಭೈರವನಾಯಕನು ವಿನೋದವಾಗಿ ಹೇಳಿರುವಂತೆ "ಇಂದಿನಾ ಬಿರುಗಾಳಿಯಲಿ ಸಿಲ್ಕಿ ಮಾಯವಾದಳು." ತಾನೇ ಎಬ್ಬಿಸಿದ ಬಿರುಗಾಳಿ ಶಿವನಾಯಕ ಆ ದ್ವೀಪಕ್ಕೆ ಬರಲು ಕಾರಣವಾಯಿತು. ತಾನು ಮೈಯೆಲ್ಲ ಕಣ್ಣಾಗಿ ಕಾಪಾಡಿಕೊಂಡಿದ್ದ ತನ್ನ ಏಕೈಕ ಪುತ್ರಿ–ತನ್ನ ದೀರ್ಘ ಅಜ್ಞಾತವಾಸದಲ್ಲಿ ತನ್ನ ಬದುಕಿನ ಉತ್ಸಾಹದ ಬುಗ್ಗೆಯಾಗಿದ್ದವಳು ಶಿವನಾಯಕನ ಒಲವಿನ ರಾಣಿಯಾದಳು! ರಣನಾಯಕನ ಸೊಸೆಯಾದಳು! ಕೊಡಗೂಸನ್ನು ಕೊಟ್ಟಾಯಿತು. ಭೈರವನಾಯಕ ಕೃತಕೃತ್ಯನಾದನು. ಇನ್ನುಳಿದ ತನ್ನ ಬಾಳುವೆಯನ್ನೆಲ್ಲ ಶಿವನ ಧ್ಯಾನದಲ್ಲಿಯೇ ಕಳೆಯಲು ನಿರ್ಧರಿಸಿಕೊಂಡನು. ಅವನಿಗೆ ರಾಜ್ಯಮೋಹವಿಲ್ಲ. ಅಧಿಕಾರ ದರ್ಪಗಳ ಆಸೆಯೂ ಇಲ್ಲ. ತನ್ನನ್ನು ಇಷ್ಟು ಬಗೆಯ ಕಷ್ಟನಷ್ಟಗಳಿಗೆ ಗುರಿಮಾಡಿದ ದ್ರೋಹಿಗಳ ಮೇಲೆ ಸೇಡು ತೀರಿಸಿಕೊಳ್ಳುವ ಆಸೆಯೂ ಇಲ್ಲ. ಇಂಥಾ ಶುದ್ಧಮಾನಸನಾದ ಭೈರವನಾಯಕ

ತನ್ನ ಮಂತ್ರಶಕ್ತಿಯಿಂದ ವಶಪಡಿಸಿಕೊಂಡು ಕಿಂಕರರಾಗಿ ಮಾಡಿಕೊಂಡಿದ್ದ ಸಮಸ್ತ ಶಕ್ತಿಗಳನ್ನು ಬಿಡುಗಡೆ ಮಾಡಿ ತನ್ನ ಆಪ್ತನಾದ ಕಿನ್ನರನಿಗೆ ಅವನಿಗೆ ಪ್ರಿಯವಾದ ಸ್ವಾತಂತ್ರ್ಯವನ್ನು ದಾನಮಾಡಿ ಕೆಳದಿಗೆ ಹೊರಡಲು ನಿರ್ಣಯಿಸಿ ತನ್ನ ಆಪ್ತರನ್ನೆಲ್ಲ ಕುರಿತು "ಇಂದು ನಿಮ್ಮೆಲ್ಲರನ್ ನಮಿಸಿ ಬೀಳ್ಕೊಳ್ಳುವೆನ್! ನನ್ನ ಮಂತ್ರವನಿಂದು ತೊರೆಯುವೆನ್! ಮಂತ್ರದಂಗಿಯ ಹರಿದು ಬಿಸುಡುವೆನ್! ಆ ನನ್ನ ತಂತ್ರಶಾಸ್ತ್ರವನ್ನೆಲ್ಲ ಕಡಲಿನಲಿ ಮುಳುಗಿಪೆನ್" ಎಂದು ಪ್ರತಿಜ್ಞೆ ಮಾಡುತ್ತಾನೆ.

ತನಗೆ ಪ್ರಿಯನಾಗಿದ್ದು ತನ್ನ ಎಲ್ಲ ಕೆಲಸಗಳಲ್ಲಿಯೂ ಸಹಕರಿಸಿ ನೆರವು ನೀಡಿದ ಕಿನ್ನರನಿಗೇ ಅಲ್ಲದೆ ತನ್ನನ್ನು ಅತಿಥಿಯಾಗಿ ದ್ವೇಷಿಸಿ ಸದಾ ಶಪಿಸುತ್ತಿದ್ದ ವಕ್ರಬುದ್ಧಿಯ ಶನಿಯನಿಗೂ ಭೈರವನು ಸ್ವಾತಂತ್ರ್ಯವನ್ನು ನೀಡಿ, ತನ್ನ ಅಜಾತ ಶತ್ರುತ್ವವನ್ನು ಪ್ರದರ್ಶಿಸಿದ್ದಾನೆ.

### ಗೌರಾಂಬೆ—ಶಿವನಾಯಕ

ಗೌರಾಂಬೆ ಭೈರವನಾಯಕನ ಏಕೈಕ ಪುತ್ರಿ. ಕೇವಲ ಮೂರು ವರ್ಷ ವಯಸ್ಸಿನ ಹಸುಗೂಸಾಗಿದ್ದಾಗ, ಕೆಳದಿಯಿಂದ ಹೊರಟು ತಂದೆಯ ಜತೆಯಲ್ಲಿ ನಿರ್ಮಾನುಷವಾದ ಒಂದು ಅಜ್ಞಾತ ದ್ವೀಪವನ್ನು ಸೇರಿದಳು. ಅವಳಿಗೆ ತನ್ನ ಶೈಶವದ ಕಥೆ ನೆನಪೇ ಇಲ್ಲ. ನಾಲ್ಕೈದು ಜನ ಹೆಂಗಸರು ತನ್ನ ಆಡಿಸುತ್ತಿದ್ದರೆಂಬ ಒಂದು ಅಂಶ ಮಾತ್ರ ಅವಳ ಮನಸ್ಸಿನಲ್ಲಿ ಮಬ್ಬುಮಬ್ಬಾಗಿ ಮಸಕಾದ ಕನಸಿನ ಹಾಗೆ ಆಗಾಗ ಮಿಣುಕುತ್ತಿತ್ತು. ತಾನು ಕಳೆದುಕೊಂಡ ನಾಗರಿಕತೆಯ ಸೌಭಾಗ್ಯವನ್ನು ಅವಳರಿಯಳು. ಹಾಗೆಯೇ ಆ ಪ್ರಪಂಚದ ದುರ್ದೋಷಗಳನ್ನೂ ಅವಳು ಕಾಣಳು. ತನ್ನ ತಂದೆ ಹಿಂದೆ ಎಲ್ಲಿದ್ದನು, ಇಲ್ಲಿಗೆ ಹೇಗೆ ಬಂದನು, ಎಂಬುದೊಂದನ್ನೂ ಅವಳು ಅರಿಯಳು. ತಾಯಿ, ಗೆಳತಿಯರು, ಯಾರೂ ಇಲ್ಲದೆ ಏಕೈಕ ಬಂಧುವಾದ ತಂದೆ ಭೈರವನಾಯಕನ ಪ್ರೇಮಪೂರ್ಣ ಆರೈಕೆಯಲ್ಲಿ ಬೆಳೆದವಳು.

ತಂದೆ ಹೊರತು ಬೇರೆ ಮಾನವರನ್ನೇ ಕಾಣದೆ ಹನ್ನೆರಡು ವರ್ಷ ಕಾಲ ಬೆಳೆದ ಈ ಮುಗ್ಧೆಗೆ ಶಿವನಾಯಕ ಮೊದಲು ಕಾಣಿಸಿದಾಗ ಅವನು ಮಾನವನಿರಬಹುದೆಂದೇ ತೋರಲಿಲ್ಲ. "ಅದೇನದು? ದೇವತೆಯೇ?....ಸೊಬಗಿನಾಕಾರಮದು ದೇವತೆಯೆ ದಿಟ" ಎಂದು ಅವಳು ತನ್ನ ತಂದೆಯೊಡನೆ ನುಡಿಯುತ್ತಾಳೆ. ಆಗ ಭೈರವನು ಅವಳಿಗೆ ಅವನೂ ತಮ್ಮಂತೆಯೇ ತಿಂದು ಕುಡಿದು ನಿದ್ರಿಸುವ

ಮಾನವನೆಂದೂ ಮುಳುಗಿಹೋದ ದೋಣಿಯೊಳಗಿದ್ದವನೆಂದೂ ಹೇಳಬೇಕಾಯಿತು. ಆದರೆ ಇದರಿಂದ ಅವಳ ಆಶ್ಚರ್ಯ ಕುಗ್ಗಲಿಲ್ಲ. "ಇನಿತು ಸೊಬಗನು ತೋರ್ಪ ವಸ್ತುವನು ಬುವಿಯ ಮೇಲ್ ಆನು ಕಂಡರಿಯೆ" ಎನ್ನುತ್ತಾಳೆ. ನಾಗರಿಕ ಹೆಣ್ಣುಗಳಿಗಿರುವ ಕೆಲವು ಸಂಕೋಚ ಲಜ್ಜೆಗಳು ಈಕೆಗಿಲ್ಲ. ಅವಳು ತನ್ನ ಬಗೆಯ ಭಾವಗಳನ್ನು ತಂದೆಯೊಡನೆ ಬಿಚ್ಚುಮನದಿಂದ ಹೇಳಿಕೊಳ್ಳುತ್ತಾಳೆ; ತನ್ನನ್ನು ನೋಡಿ ಬೆರಗಾದ ಶಿವನಾಯಕನೊಡನೆ ಧಾರಾಳವಾಗಿ ಮಾತನಾಡುತ್ತಾಳೆ.

ಶಿವನಾಯಕ–ಗೌರಾಂಬೆಯರ ಪರಸ್ಪರ ಪ್ರಣಯವನ್ನು ಶಕುಂತಲಾ ದುಷ್ಯಂತರ ಪ್ರೇಮ ಕಥೆಗೆ ಹೋಲಿಸುವುದುಂಟು. ಆದರೆ ಶಕುಂತಲೆಗೂ ಗೌರಾಂಬೆಗೂ ಕೆಲವು ಮುಖ್ಯ ವ್ಯತ್ಯಾಸಗಳಿವೆ. ಶಕುಂತಲೆ ಋಷ್ಯಾಶ್ರಮದಲ್ಲಿ ಕಣ್ವರಂಥ ಋಷಿಯ ಪೋಷಣೆಯಲ್ಲಿ ಬೆಳೆದವಳೇನೋ ಹೌದು. ಆದರೆ ಅವಳು ಈ 'ಬಿರುಗಾಳಿ'ಯ ಗೌರಾಂಬಿಕೆಯಂತೆ ಮಾನವರನ್ನೇ ಕಾಣದವಳಲ್ಲ. ಗೌತಮಿಯೆಂಬ ವೃದ್ಧ ಸ್ತ್ರೀಯೊಬ್ಬಳು ಅವಳ ಪೋಷಣೆಯ ಕಾರ್ಯವನ್ನು ನೋಡಿಕೊಳ್ಳುತ್ತಿದ್ದಳು. ಕಣ್ವ ಮಹರ್ಷಿಗಳು ತನ್ನ ಸಾಕುಮಗಳ ಸೌಕರ್ಯಕ್ಕಾಗಿ ಅವಳ ಓರಗೆಯ ಕೆಲವು ಹೆಣ್ಣುಮಕ್ಕಳನ್ನು ಆಶ್ರಮದಲ್ಲಿ ಪೋಷಿಸುತ್ತಿದ್ದರು. ಗೌರಾಂಬೆ ಈ ಸೌಲಭ್ಯಗಳನ್ನು ಪಡೆದವಳಲ್ಲ.

ಶಕುಂತಲಾ ದುಷ್ಯಂತರ ಪ್ರಣಯ ಆಶ್ರಮದ ಹಿರಿಂಪುರಿಗೆ ತಿಳಿಯದೆ ರಹಸ್ಯವಾಗಿ ನಡೆದದ್ದು. ಗೌರಾಂಬೆ ಶಿವನಾಯಕರ ಪ್ರಣಯ ಹಾಗಲ್ಲ. ಭೈರವನಾಯಕನಿಗೆ ತಿಳಿಯದೆ ಇವರ ಒಲವು ಬೆಳೆಯಲಿಲ್ಲ. ತನ್ನ ಅಕ್ಕರೆಯ ಮಗಳು ಪ್ರೇಮಪರವಶಳಾದುದನ್ನು ತಿಳಿದು ಶಿವನಾಯಕನನ್ನು ವಿಧವಿಧವಾಗಿ ಪರೀಕ್ಷಿಸಿ ಅವನ ಚಾರಿತ್ರ್ಯದ ವಿಚಾರದಲ್ಲಿ ಮೆಚ್ಚುಗೆಯಾದ ಮೇಲೆ ತಾನೇ ಅವಳನ್ನು ಕೊಟ್ಟು ಮದುವೆ ಮಾಡುವನು.

ಕಣ್ಣು ಕೂಡುವ ಮುನ್ನವೇ, ಎದೆಯೆರಡು ಕೂಡಿದುವು. ಪ್ರಥಮ ಸಂದರ್ಶನದಲ್ಲಿಯೇ ಗೌರಾಂಬೆ, ಶಿವನಾಯಕನಿಗೆ ಒಲಿದಳು. ತನ್ನ ತಂದೆ ಅವನನ್ನು ಬಿರುನುಡಿಗಳಿಂದ ನೋಯಿಸಲು ಅವಳು "ಅಪ್ಪಯ್ಯ ನೋಯಿಸದಿರೀ ತನಂ, ಸುಂದರಂ, ಕೋಮಲಂ, ಕಣ್ಗಮುತಿಚೆಲುವಂ" ಎಂದು ಅವನ ಪರವಾಗಿ ತಂದೆಯ ಸಂಗಡ ವಾದಿಸುತ್ತಾಳೆ. ಭೈರವನಾಯಕ ಕಪಟ ಕೋಪವನ್ನು ಪ್ರದರ್ಶಿಸಿ ಅವನನ್ನು ಕಾಯಕಷ್ಟದ ಕೆಲಸಕ್ಕೆ ನಿಯಮಿಸಿದಾಗ ಗೌರಾಂಬೆ ಬಹಳ

ನೊಂದುಕೊಳ್ಳುತ್ತಾಳೆ. ತನ್ನ ತಂದೆಯ ಕ್ರೂರವರ್ತನೆ ಅವಳ ಸುಕುಮಾರ ಹೃದಯವನ್ನು ಬಹಳ ನೋಯಿಸುತ್ತದೆ. ಅವಳು ತನ್ನ ತಂದೆಗೆ ತಿಳಿಯದಂತೆ–ಹಾಗೆಂದು ಅವಳ ಭಾವನೆ–ಶಿವನಾಯಕನ ಸಂಗಡ ಏಕಾಂತವಾಗಿ ಮಾತನಾಡಿ ಅವನಿಗೆ ಸಮಾಧಾನ ಹೇಳುತ್ತಾಳೆ; ಅವನೊಡನೆ ಸರಸ ಸಂಭಾಷಣೆ ನಡೆಸುತ್ತಾಳೆ. ಅವಳು ಪ್ರೇಮೋದ್ರೇಕದ ಭರದಲ್ಲಿ ತನ್ನ ತಂದೆಯ ಅಪ್ಪಣೆಗೆ ವ್ಯತಿರಿಕ್ತವಾಗಿ ತನ್ನ ಹೆಸರನ್ನು ಅವನಿಗೆ ಹೇಳಿಬಿಡುತ್ತಾಳೆ. ಅದುವರೆಗೆ ಎಂದೂ ತಂದೆಯ ಮಾತನ್ನು ಮೀರದೆ ಇದ್ದ ಆ ಮುಗ್ಧೆಗೆ ಒಡನೆಯೇ ಪೇಚಾಟ ಹುಟ್ಟಿ "ಅಯ್ಯೋ ತಪ್ಪಿದೆನ್" ಎಂದು ಹಲಬುತ್ತಾಳೆ. ಆದರೆ ಇವರ ಪ್ರೇಮ ಸಂಭಾಷಣೆಯನ್ನೆಲ್ಲ ಅದೃಶ್ಯನಾಗಿ ಕೇಳುತ್ತಿದ್ದ ಭೈರವನಾಯಕನು,

"ಜವ್ವನೆಗೆ ಬಲಿತಿಹುದು ಬೇಟಂ! ಇನ್ನೇನು? ಬೇಟಕಾಹುತಿಯಾಗಿ ಬಿಟ್ಟೆಳ್ ಎನ್ನಣುಗಿ" ಎಂದು ಮೊದಲು ಅಂಜಿದರೂ ಕಡೆಗೆ "ಇದು ನಿರುಪಮ ಪ್ರೇಮಗಳ ಮಧುರ ಸಂಗಮಂ! ಓ ಓ ದೇವತೆಗಳಿರಾ, ಪೂವಲಿಯ ಚೆಲ್ಲಿಂ"

ಎಂದು ಸಂತೋಷದಿಂದ ಹರಸುತ್ತಾನೆ. ಮಗಳ ಸಂತೋಷಕ್ಕಿಂತಲೂ ಅವನ ಸಂತೋಷ ಅಧಿಕತರವಾಗಿರುತ್ತದೆ. "ಅವರೆದೆಯ ಇಂಗೊಳದೊಳೆನ್ನೆದೆಯ ಪಾಲ್ಗಡಲ್" ಎಂದು ಅವನ ನಂಬಿಕೆ.

ಶಕುಂತಲೆಗೆ ಒದಗಿದ ದುಃಖ–ಅಪಮಾನಗಳು ಗೌರಾಂಬೆಗಿಲ್ಲ. ಅವಳು ಸದಾ ಎಚ್ಚರದಿಂದಿರುವ ತಂದೆಯ ಪ್ರೇಮರಕ್ಷೆಯಲ್ಲಿದ್ದಾಳೆ. ಅವನ ಒಲವು ಅವಳ ರಕ್ಷಾಕವಚ. ಅವನಿಗೆ ತಿಳಿಯದೆ ಆ ದ್ವೀಪದಲ್ಲಿ ಏನೂ ನಡೆಯುವಂತಿರಲಿಲ್ಲ.

ಗೌರಾಂಬೆ ಚೆಲುವೆ. ಅವಳ ಅಸಾಧಾರಣ ಸೌಂದರ್ಯ ಶಿವನಾಯಕನನ್ನು ಬೆರಗು ಮಾಡಿತು. ಇವಳೇನು ದೇವಕನ್ಯೆಯೋ ಎಂದು ಅವನು ಬೆರಗಾಗಲು ಗೌರಾಂಬೆಯೇ ಅವನಿಗೆ ತಾನೊಬ್ಬ ಮಾನವ ಕನ್ಯೆಯೆಂದು ಹೇಳಿಕೊಳ್ಳ ಬೇಕಾಯಿತು. ಚೆಲುವಿನಷ್ಟೇ ಅತಿಶಯವಾದ ಸೌಜನ್ಯವುಳ್ಳವಳು. ಗೌರಾಂಬೆ ತಂದೆ ತನ್ನ ಹಿಂದಿನ ಕತೆಯನ್ನು ಹೇಳುವಾಗ ಕೆಳದಿಯಲ್ಲಿ ತನಗೆ ಹೆಚ್ಚಾದ ಸಹಾಯಮಾಡಿದ ಜಯದೇವನನ್ನು ಸ್ಮರಿಸಲು "ಪುಣ್ಯಾತ್ಮನಾತನನು ಎಂದಾದೊಡಂ ನಾನು ನೋಡುವೆನೆ" ಎನ್ನುತ್ತಾಳೆ. ತನ್ನ ತಂದೆಗೆ ಅಂಥ ಕಷ್ಟ ಕಾಲದಲ್ಲಿ–ಮಿಕ್ಕೆಲ್ಲ ಜನ ವೈರಿಗಳಾಗಿದ್ದಾಗ–ಪ್ರೀತಿಯಿಂದ ಸಹಾಯ ಮಾಡಿದಾತನ ಮೇಲೆ ಅವಳಿಗೆ ಬಹಳ ಭಕ್ತಿ. ತನ್ನ ತಂದೆ ಹನ್ನೆರಡು ವರ್ಷಗಳ

ಹಿಂದೆ ಎಳೆಯ ಕೂಸಾಗಿದ್ದ ತನ್ನನ್ನು ಕರೆದುಕೊಂಡು ಹರಿಗೋಲಿನಲ್ಲಿ ಇರುಳೆಲ್ಲ ತೇಲಿ ಈ ನಿರ್ಜನ ದ್ವೀಪವನ್ನು ಸೇರಿದುದಾಗಿ ತಿಳಿಸಿದಾಗ ಅವಳಿಗೆ ತನ್ನಿಂದ ತನ್ನ ತಂದೆಗೆ ಎಷ್ಟು ಹಿಂಸೆಯಾಯಿತೋ ಎಂದು ವ್ಯಥೆಯಾಗುತ್ತದೆ. "ಅಪ್ಪಯ್ಯ, ನಿನಗೆನಿತು ಅಳಲನಿತ್ತೆನೊ ನಾನು ?" ಎಂದು ಮರುಗುತ್ತಾಳೆ. ಅವಳ ಮಂದಹಾಸವೇ ಭೈರವನಾಯಕನಿಗೆ ಉತ್ಸಾಹದಾಯಕವಾಯಿತೆಂದು ಗೌರಾಂಬೆ ಅರಿಯಳು. ಅವಳಿಗಾಗಿಯೇ ಭೈರವನು ಬದುಕಿನಲ್ಲಿ ಆಸೆಪಟ್ಟದ್ದು, ಅವಳ ಕಣ್ಬೆಳಕೇ ಅವನಿಗೆ ದಾರಿ ತೋರಿಸಿತು. ಜತೆಯವರ ದ್ವೇಷ-ದ್ರೋಹಗಳಿಂದ ಬೇಸತ್ತಿದ್ದ ಭೈರವನಾಯಕನು ಹಸುಗೂಸಿನ ಮುದ್ದು ಮಾತುಗಳಿಂದ, ಶಿಶುತನದ ಅಮಾಯಕತೆಯಿಂದ ಈ ಶಾಂತಿ ಸಮಾಧಾನಗಳನ್ನು ಹೊಂದಿದನು. ಗೌರಾಂಬೆ ಶುದ್ಧ ಮನಸ್ಸಿನ ಮುಗ್ಧೆ ; ಹೂವೆದೆಯ ಹೆಣ್ಣು.

ಶಿವನಾಯಕನು ಮರದ ತುಂಡುಗಳನ್ನು ಹೊರಲಾರದೆ ಕಷ್ಟಪಡುತ್ತಿದ್ದುದನ್ನು ಕಂಡು ಅವನ ಬದಲು ತಾನು ಆ ಕೆಲಸ ಮಾಡುವುದಾಗಿ ಗೌರಾಂಬೆ ಮುಂದೆ ಬರುತ್ತಾಳೆ. ಅವಳಿಗೆ ತನ್ನ ಪ್ರೇಮಿ ಕಷ್ಟಕ್ಕೀಡಾಗಿರುವುದನ್ನು ನೋಡಿ ಸಹಿಸುವುದಕ್ಕೆ ಆಗದು. ಅವನು ತನ್ನನ್ನು ಒಲಿದನೆಂದು ತಿಳಿದಾಗ ಅವಳ ಸಂತೋಷಕ್ಕೆ ಮಿತಿಯಿಲ್ಲದಂತಾಯಿತು. " ಚೆನ್ನೆಯರ, ಚೆನ್ನಿಗರ, ಚೆಲುವುಗಳ ವಿವಿಧತೆಯ ಅನುಭವಂ ನನಗಿಲ್ಲ. ಆದೊಡಂ ನೀನಿಲ್ಲದಿನ್ನಾರನ್ ಆನೊಲಿಯೆ " ಎಂದು ನುಡಿದು ಗೌರಾಂಬೆ ತನ್ನ ಅವಿಚಲವಾದ ಪವಿತ್ರ ಪ್ರೇಮದ ಘನತೆಯನ್ನು ಹೊರಗೆಡವಿದ್ದಾಳೆ.

ಗೌರಾಂಬೆ-ಶಿವನಾಯಕರ ಪ್ರಥಮ ಸಂದರ್ಶನವಾದಾಗ ನಡುಹಗಲು ದಾಟಿತ್ತು. ಆ ಸಂಜೆಯೊಳಗಾಗಿ ಇವರ ಪ್ರಣಯ ಮೊಳೆತು ಬಲಿತು ಬೆಳೆದು ವಿವಾಹದಲ್ಲಿ ಫಲಿಸಿತು ! ಅಂದರೆ ಇವರ ಪ್ರಣಯ ಕತೆ ಬಿರುಗಾಳಿಯಂತೆಯೇ ಮಹಾ ವೇಗದಿಂದ ನಡೆಯಿತು. ಈ ಇಬ್ಬರು ಪ್ರಣಯಿಗಳೂ ಅಪ್ರತಿಹತವಾದ ಪ್ರಣಯ ಪ್ರವಾಹದಲ್ಲಿ ಸಿಕ್ಕಿಬಿಟ್ಟರು. ತನ್ನ ತಂದೆಯು ಮರಣಹೊಂದಿದನೆಂದು ತಿಳಿದಿದ್ದ ಶಿವನಾಯಕನು ಮಹಾ ದುಃಖಿತನಾಗಿ ಓಡಾಡುತ್ತಿದ್ದವನು, ಗೌರಾಂಬೆಯ ದರ್ಶನದಿಂದ ಮಿಕ್ಕೆಲ್ಲ ವಿಷಯಗಳನ್ನೂ ಮರೆತನು. ಅವನಿಗೆ ತನ್ನ ತಂದೆ ಚಿಕ್ಕಪ್ಪಗಳು ಬದುಕಿರಬಹುದೆಂಬ ಯೋಚನೆಯೇ ಬರಲಿಲ್ಲ. ಆದ್ದರಿಂದ ಅವನು ಮಾನವ ಯತ್ನಕ್ಕೆ ಮೀರಿದ ವಿಷಯಕ್ಕೆ ಮರುಗುತ್ತಾ ಕುಳಿತುಕೊಳ್ಳುವುದು ಮೂರ್ಖತನವೆಂದು ಬಗೆದು ದ್ವೀಪವನ್ನು ಶೋಧಿಸಲು ಹೊರಟು ಭೈರವನೊಡನೆ

ಜಗಳವಾಡಿ ಸೋತು ಗೌರಾಂಬೆಯನ್ನು ಕಂಡು ಅವಳ ಮೋಹಕ್ಕೆ ಸೆರೆಸಿಕ್ಕಿದನು. ಕೊಂಚ ಹೊತ್ತಿನಲ್ಲಿಯೇ ಆವಳ ಅತಿಶಯವಾದ ಮುಗ್ಧ ಪ್ರೇಮಕ್ಕೆ ಮನಸೋತ ತನ್ನ ಪ್ರೇಮ ದೇವತೆಯಾದ ಅವಳನ್ನು ಒಲಿದು ವಿವಾಹವಾಗುವನು. ಅವನಿಗೆ ಮತ್ತೆ ತಂದೆಯು ಭೇಟಿಯಾದಾಗ ಗಂಭೀರವಾಗಿ ತನ್ನ ಪ್ರೇಮ ವಿವಾಹದ ಸುದ್ದಿ ಹೇಳಿ ಅವನನ್ನು ಒಪ್ಪಿಸುವನು. ಈ ಪ್ರೇಮಕಥೆ ಮಹಾ ಮಧುರ ಸುಂದರ ವಾಗಿದೆ. ದ್ರೋಹ, ಮಸಲತ್ತು, ಪಿತೂರಿ, ದ್ವೇಷ, ಸೇಡುಗಳ ಕಥೆಯಿಂದ ಕೂಡಿರುವ ಈ 'ಬಿರುಗಾಳಿ' ನಾಟಕದಲ್ಲಿ ಗೌರಾಂಬೆ–ಶಿವನಾಯಕರ ಪವಿತ್ರ ಪ್ರಣಯದ ಕಥೆ ಓದುಗರಿಗೆ ಒಂದು ಆನಂದ ಸ್ರೋತದಂತೆ ತೋರುತ್ತದೆ.

## ಕಿನ್ನರ

'ಬಿರುಗಾಳಿ' ನಾಟಕದಲ್ಲಿ ನಮ್ಮನ್ನು ಬಹಳ ಮೆಚ್ಚಿಸುವ ಪಾತ್ರವೆಂದರೆ ಕಿನ್ನರನ ಪಾತ್ರ. ಈ ಕಿನ್ನರ ಮಹಾ ಅದ್ಭುತ ಶಕ್ತಿ. ಇವನು ಇತರರಿಗೆ ಕಾಣಿಸಿ ಕೊಳ್ಳದೆ ಇದ್ದು ಬೇಕಾದ ಕೆಲಸಗಳನ್ನು ಮಾಡಬಲ್ಲನು. ಭೈರವನಾಯಕನ ನಂಬುಗೆಯ ಸೇವಕ ಈ ಕಿನ್ನರ. ಇವನೇ ರಣನಾಯಕನ ದೋಣಿಯನ್ನು ಮುಳುಗಿಸಿದವನು. ಇವನೇ ಮತ್ತೆ ಆ ದೋಣಿಯ ಪ್ರಯಾಣಿಕರನ್ನು ರಕ್ಷಿಸಿದವನು. ಇವನಿಂದ ಆಗದ ಕೆಲಸವೇ ಇಲ್ಲ. ಇಂಥಾ ಭೃತ್ಯನು ಸಿಕ್ಕಿದುದರಿಂದ ಭೈರವನ ಕಾರ್ಯ ಸುಲಭವಾಯಿತು. ಭೈರವನೇ ಹೇಳಿರುವಂತೆ ಇವನು ನಿಜವಾಗಿ ಕೈಂಕರ್ಯ ಮೂರ್ತಿ!

ಕಿನ್ನರನಿಗೆ ತನ್ನ ಸ್ವಾತಂತ್ರ್ಯದ ಮೇಲೆ ಬಹಳ ಆಸೆ. ಬೇಗನೆ ತನ್ನ ಕಿಂಕರ ವೃತ್ತಿಯನ್ನು ಕಳೆದುಕೊಂಡು ಸ್ವೇಚ್ಛೆಯಾಗಿ ಓಡಾಡಿಕೊಂಡಿರಬಹುದೆಂದು ಅವನ ಅಪೇಕ್ಷೆ. ಇವನು ಭೈರವನ ದಾಸ್ಯಕ್ಕೆ ಸಿಕ್ಕುಬಿದ್ದ ರೀತಿಯಾದರೂ ಬಹಳ ವಿಚಿತ್ರವಾದದ್ದು. ಇಂಥಾ ಮಹಾ ಶಕ್ತಿಯುತನೂ, ಸ್ವಚ್ಛಂದಚಾರಿಯೂ, ದೃಷ್ಟಿಗೆ ಅಗೋಚರನೂ ಆದ ಕಿನ್ನರನು ದುರ್ದೈವದಿಂದ ಒಂದು ಸಲ ಮಲೆಯಾಳದ ಮಂತ್ರವಾದಿನಿಯೊಬ್ಬಳ ದ್ವೇಷಕ್ಕೆ ಗುರಿಯಾಗಿ ಅವಳ ಮಂತ್ರ ಜಾಲದಲ್ಲಿ ಸಿಕ್ಕಿಕೊಂಡನು. ಅವಳ ಕ್ರೂರವಾದ ಅಪ್ಪಣೆಗಳನ್ನು ನೆರವೇರಿಸದೆ ಹೋಗಲು ಅವಳು ಇವನನ್ನು ಒಂದು ಆಲದ ಮರದ ಗರ್ಭದಲ್ಲಿ ಇರುಕಿಸಿ ಚಿತ್ರ ಹಿಂಸೆಗೆ ಗುರಿಮಾಡಿ ಸೆರೆಹಾಕಿದಳು. ಕಿನ್ನರನು ಏನು ಸಾಹಸ ಮಾಡಿದರೂ ಆ ಬಂಧನದಿಂದ ಬಿಡಿಸಿಕೊಳ್ಳಲಾರದೆ ಸಂಕಟದಿಂದ ಗೋಳಿಡುತ್ತಿದ್ದನು. ಈ ಮಧ್ಯೆ ಆ ಮಂತ್ರವಾದಿನಿ ಕಾಲವಶಳಾದಳು. ಆಮೇಲೆ ಆ ದ್ವೀಪಕ್ಕೆ ಬಂದ ಭೈರವ

ನಾಯಕನು ಇವನ ಗೋಳನ್ನು ಕೇಳಿ ಕನಿಕರಿಸಿ ತನ್ನ ಮಂತ್ರಶಕ್ತಿಯಿಂದ ಇವನ ಸೆರೆಬಿಡಿಸಿ ತನ್ನ ಕಿಂಕರನಾಗಿ ಮಾಡಿಕೊಂಡನು. ಆದರೆ ಇನ್ನೊಂದು ವರ್ಷದಲ್ಲಿ ಅವನಿಗೆ ಬಿಡುಗಡೆ ಮಾಡುವುದಾಗಿ ಭಾಷೆ ಕೊಟ್ಟಿದ್ದನು. ಸನ್ನಿವೇಶ ವಶದಿಂದ ಎರಡು ವರ್ಷಗಳಾದರೂ ಭೈರವನಾಯಕನ ಭಾಷೆ ನೆರವೇರಿರಲಿಲ್ಲ. ಇದರಿಂದ ಕಿನ್ನರನಿಗೆ ಕೊಂಚ ಅತೃಪ್ತಿ, ಆದರೆ ಅವನು ಕೃತಘ್ನನಲ್ಲ. ಭೈರವನು ತನಗೆ ಮಾಡಿದ ಉಪಕಾರವನ್ನು ನೆನೆದು ಅವನ ಆಜ್ಞೆಗಳನ್ನೆಲ್ಲ ನೆರವೇರಿಸುತ್ತಾನೆ.

ರಣನಾಯಕನ ದೋಣಿಯನ್ನು ಮುಳುಗಿಸುವ ಕೆಲಸ ಅವನಿಗೆ ಬಹಳ ಉತ್ಸಾಹಕರವಾಗಿದ್ದಿತೆಂದು ತೋರುತ್ತದೆ. ಆ ವೃತ್ತಾಂತವನ್ನು ತನ್ನ ಒಡೆಯನಿಗೆ ಬಹಳ ಸಡಗರದಿಂದ ವರದಿ ಮಾಡುತ್ತಾನೆ. ಅದೃಶ್ಯನಾದ ಕಿನ್ನರ ದೋಣಿಯ ಅಂಚಿನಲ್ಲಿ ಹುಚ್ಚು ಕುಣಿತ ಕುಣಿದು ಅಂಬಿಗರನ್ನೂ ಪ್ರಯಾಣಿಕರನ್ನೂ ಗಾಬರಿಗೊಳಗುಮಾಡಿ ಅವರು ತಮ್ಮ ವಿಪತ್ತಿನ ಕಾರಣವನ್ನು ಕಾಣದೆ ತಳಮಳಗೊಂಡು ತಮ್ಮ ಸುತ್ತಲೂ ಆವರಿಸಿದ ಜ್ವಾಲೆಯನ್ನು ಕಂಡು ಎಲ್ಲ ಆಸೆಗಳನ್ನೂ ಬಿಟ್ಟು ಹುಚ್ಚರಂತೆ ಹೊಳೆಗೆ ಹಾರುತ್ತಾರೆ. ಈ ಗಾಳಿ ಬೆಂಕಿಗಳೆಲ್ಲ ಕಿನ್ನರನ ಮಾಯೆ. ಇಲ್ಲದಿದ್ದರೆ ಹೊಳೆಯ ನಡುವೆ ಬೆಂಕಿಯೆಲ್ಲಿಂದ ಬರಬೇಕು? ಆದರೆ ಅಷ್ಟೆಲ್ಲ ವಿಚಾರ ಮಾಡಲು ಆ ಜನಕ್ಕೆ ಆಗ ಅವಕಾಶವೆಲ್ಲಿ? ತಾಳ್ಮೆಯೆಲ್ಲಿಂದ ಬರಬೇಕು? ಅವರ ಪಾಲಿಗೆ ಅದು ಪ್ರತ್ಯಕ್ಷ ನರಕವಾಯಿತು. ಯಮನ ಆಳುಗಳೆಲ್ಲ ನರಕದಿಂದ ಅಲ್ಲಿಗೇ ಬಂದಿದ್ದಂತೆ ಅವರಿಗೆ ಅನ್ನಿಸಿತು. ಒಬ್ಬೊಬ್ಬರೇ ಹೊಳೆಗೆ ಧುಮಿಕಿದರು.

ತನ್ನ ಒಡೆಯನ ಅಪ್ಪಣೆಗಳನ್ನು ನೆರವೇರಿಸುವಾಗಲೂ ಕಿನ್ನರ ಆದಷ್ಟು ವಿನೋದವನ್ನು ಪಡೆಯುತ್ತಾನೆ. ಬೀಮಣ ತ್ರಿಶಂಕುಗಳ ನಡುವೆ ಜಗಳ ತಂದಿಡುವ ಸನ್ನಿವೇಶ ಬಹಳ ಚಮತ್ಕಾರವಾಗಿದೆ. ತ್ರಿಶಂಕು ಮೌನವಾಗಿದ್ದರೂ ಕಿನ್ನರನು ಅವನ ಧ್ವನಿಯಲ್ಲಿ ಮಾತನಾಡಿ ಬೀಮಣನಿಗೆ ಅವನ ಮೇಲೆ ಅಸಮಾಧಾನ ಹುಟ್ಟಿಸುತ್ತಾನೆ. ಅವರ ಪರದಾಟ ನೋಡಿ ನಗುತ್ತಾನೆ, ಕಿನ್ನರ. ಕುಡುಕರಾದ ಬೀಮಣ ತ್ರಿಶಂಕುಗಳು ಚಿಂದಿಯ ಬಟ್ಟೆಗಳನ್ನೇ ಅನರ್ಘ್ಯ ವಸ್ತುಗಳೆಂದು ಭ್ರಮಿಸಿ–ಭೈರವನ ಮಾಯಾಮಹಿಮೆಯಿಂದ–ಅವುಗಳಿಗಾಗಿ ಜಗಳವಾಡುತ್ತಿದ್ದುದನ್ನು ಕಂಡು ಶನಿಯುನು ಪೇಚಾಡುವ ದೃಶ್ಯ ಕಿನ್ನರನಿಗೆ ವಿನೋದ.

ಕಡೆಯಲ್ಲಿ ಭೈರವನಾಯಕನು ತನ್ನೆಲ್ಲ ಬಂಧುಗಳೊಡನೆ ದೋಣಿಯನ್ನೇರಿ

ಸ್ವದೇಶಾಭಿಮುಖವಾಗಿ ಹೊರಟಾಗ ಕಿನ್ನರನು ಅವರಿಗೆ ಬೆಂಗಾವಲಾಗಿ ಹೋಗಿ ಅವರು ಕೆಳದಿಯ ಸಮೀಪವನ್ನು ಸೇರಿದಾಗ ಭೈರವನ ಅಪ್ಪಣೆ ಹೊಂದಿ ಹಿಂದಿರುಗುತ್ತಾನೆ. ಅಂತು 'ಬಿರುಗಾಳಿ' ನಾಟಕದ ಆದ್ಯಂತನೂ ಕಿನ್ನರನ ಪಾತ್ರವಿದೆ. ಬಿರುಗಾಳಿಯನ್ನೆಬ್ಬಿಸುವ ಗಳಿಗೆಯಿಂದ ಹಿಡಿದು ಅವರೆಲ್ಲ ಆ ಮಾಯಾಮಯವಾದ ದ್ವೀಪವನ್ನು ಬಿಟ್ಟು ಹೊರಡುವ ತನಕ ಕಿನ್ನರ ಒಂದಲ್ಲ ಒಂದು ರೀತಿಯಲ್ಲಿ ತನ್ನ ಪ್ರಭಾವವನ್ನು ಬೀರುತ್ತಿರುತ್ತಾನೆ.

ಕಿನ್ನರನು ಸಾಧಾರಣವಾಗಿ ಮನುಷ್ಯರ ಕಣ್ಣಿಗೆ ಅಗೋಚರನು. ಅವನು ವಿಶೇಷ ಸನ್ನಿವೇಶದಲ್ಲಿ ಕಾಣಸಿಕ್ಕಾಗ ಬಹಳ ಸುಂದರಾಕಾರನು. ಅವನ ಆಕಾರದಂತೆ ಮನಸ್ಸೂ ಬಹಳ ಸೌಮ್ಯವಾದದ್ದು. ಅವನು ಕರುಣಾಪೂರಿತ ಹೃದಯನು. ರಣನಾಯಕಾದಿಗಳು ದುಃಖದಿಂದ ಬೇಯುತ್ತಿದ್ದುದನ್ನು ಕಂಡು ಅವನ ಮನಸ್ಸು ಕರಗುತ್ತದೆ. ಅದನ್ನು ಭೈರವನ ಸಂಗಡ ಹೇಳಿ ಅವನ ಕರುಣೆಯನ್ನು ಎಚ್ಚರಗೊಳಿಸಲು ಯತ್ನಿಸುತ್ತಾನೆ.

ಮಹಾ ಮಾಯಾವಿಯಾದುದರಿಂದ ಕಿನ್ನರನು ನೆನೆಸಿಕೊಂಡ ಗಳಿಗೆಯಲ್ಲಿ ಬೇಕಾದ ವೇಷ ಧರಿಸಬಲ್ಲನು. ಭೈರವನ ಹಾಗೆ ಅವನೂ, ಮಾಯಾಶಕ್ತಿಯುಳ್ಳವ. ಅತಿ ಮಾನುಷನಾದ ಈ ಕಿನ್ನರನ ಪಾತ್ರದಿಂದ, ಭೈರವನ ಮಂತ್ರಶಕ್ತಿಯಿಂದ, ಈ ನಾಟಕದ ಕಥೆಯಲ್ಲಿ ಅದ್ಭುತ ವಿಷಯಗಳು ಹಲವು ನಡೆಯುತ್ತವೆ. ಈ ನಾಟಕವನ್ನು ಓದುವಾಗ, ರಂಗದ ಮೇಲೆ ನೋಡುವಾಗ, ನಮಗೆ ಯಾವುದೋ ಅದ್ಭುತ ಪ್ರಪಂಚದಲ್ಲಿದ್ದಂತೆ ಅನುಭವವಾದರೆ ಆಶ್ಚರ್ಯವೇನೂ ಇಲ್ಲ.

ಹೀಗೆ ಕಿನ್ನರ ಭಯಂಕರ ವಿನಾಶಕಾರ್ಯವನ್ನು ಮಾಡಿದ ಮೇಲೆ ಭೈರವನ ಅಪ್ಪಣೆಯಂತೆ ಅವರೊಬ್ಬೊಬ್ಬರನ್ನೂ ಬದುಕಿಸಿ ದಡ ಹತ್ತಿಸಿದನು. ಅವರ ದೋಣಿಯನ್ನು ಸುರಕ್ಷಿತವಾದ ಪ್ರದೇಶದಲ್ಲಿ ಕಟ್ಟಿಹಾಕಿದನು. ಅವನು ಎಬ್ಬಿಸಿದ ಬೆಂಕಿ ತಾನಾಗಿ ಅಡಗಿಹೋಯಿತು.

ನಾಟಕದ ಉದ್ದಕ್ಕೂ ಕಿನ್ನರನ ಪಾತ್ರ ಇದ್ದೇ ಇದೆ. ಅವನ ಪ್ರಭಾವ ನಾಟಕದ ಕಥೆಯಲ್ಲೆಲ್ಲ ವ್ಯಾಪ್ತವಾಗಿದೆ. ಮುಂದೆ ಶಿವನಾಯಕನನ್ನು ನೇರವಾಗಿ ಭೈರವನ ಗುಹೆಗೆ ಕರೆತಂದವನು ಕಿನ್ನರ. ದುಃಖದಲ್ಲಿ ಮುಳುಗಿ ಮುಂದೇನು ಮಾಡಬೇಕೆಂಬುದು ತೋರದೆ ಕಂಗೆಟ್ಟು, ತಲೆಯ ಮೇಲೆ ಕೈಯಿಟ್ಟು ಕುಳಿತಿದ್ದ ಶಿವನಾಯಕನನ್ನು ತನ್ನ ಹಾಡುಗಳಿಂದ ಎಚ್ಚರಗೊಳಿಸಿ ದ್ವೀಪದಲ್ಲಿ ಕುತೂಹಲ

ಬ್ರುಂಟಾಗುವಂತೆಸಗಿ, ತಾನು ಅದೃಶ್ಯನಾಗಿಯೇ ಇದ್ದು, ಅವನನ್ನು ಭೈರವ ಗೌರಾಂಬೆಯರ ಬಳಿಗೆ ಕರೆತಂದನು. ಅವರು ಪ್ರಣಯಿಗಳಾಗಿ ಕೊನೆಗೆ ಮದುವೆಯಾದಾಗ ಆ ಉತ್ಸವದಲ್ಲಿ ಬೇರೆ ಬೇರೆ ದೈವಶಕ್ತಿಗಳಿಂದ ನಾಟ್ಯವೇರ್ಪಡಿಸುವವನು ಕಿನ್ನರ.

ರಂಗನಾಯಕ ರುದ್ರನಾಯಕರು ಆ ದುಃಖ ಸಮಯದಲ್ಲಿಯೂ ದುರಾಲೋಚನೆಗೆ ತೊಡಗಿ ನಗರದರಸ ರಣನಾಯಕನನ್ನು ಕೊಲ್ಲಲು ಸಂಚು ಮಾಡಿ ಸಿದ್ಧರಾಗಿದ್ದಾಗ ರಣನಾಯಕ ಜಯದೇವರ ಕಿವಿಗಳಲ್ಲಿ ಗಟ್ಟಿಯಾಗಿ ಕೂಗಿ ಅವರನ್ನು ಎಚ್ಚರಗೊಳಿಸಿ ಸಂಚು ವಿಫಲಮಾಡಿದವನು ಕಿನ್ನರ. ಬೀಮಣ ತ್ರಿಶಂಕುಗಳು ಶನಿಯನ ದುರಾಲೋಚನೆಗೆ ಮನಸ್ಸು ಕೊಟ್ಟು ತಮಗೆ ಯಾವ ಹಾನಿಯನ್ನೂ ಮಾಡದೆ ಭೈರವನಾಯಕನನ್ನು ಕೊಲ್ಲಲು ಸಿದ್ಧರಾದಾಗ ಆ ಸಂಗತಿಯನ್ನು ಭೈರವನಿಗೆ ನೆನಪು ಮಾಡಿಕೊಟ್ಟು ತಕ್ಕ ಮಾಯೆಯನ್ನು ಬೀರಿ ಅವರನ್ನು ಅಪಹಾಸ್ಯಕ್ಕೆ ಗುರಿಮಾಡಿದನು ಕಿನ್ನರ. ಈ ಎಲ್ಲ ಕೆಲಸಗಳನ್ನೂ ಕಿನ್ನರನು ಬಹಳ ಸಂಭ್ರಮದಿಂದ ಮಾಡಿದನು. ಇದೆಲ್ಲ ಮುಗಿದ ಮೇಲೆ ತನಗೆ ಬಿಡುಗಡೆ ಸಿಗಬಹುದೆಂಬ ಆಸೆಯೂ ಇದಕ್ಕೆ ಒಂದು ಮುಖ್ಯ ಕಾರಣ. ಇದರ ಜತೆಗೆ ಅವನ ಸ್ವಭಾವವೇ ಬಹಳ ಕಾರ್ಯಶೀಲತೆ. ಸೋಮಾರಿಯಾಗಿರುವುದು ಅವನಿಂದ ಆಗುವ ಕೆಲಸವಲ್ಲ. ಅವನ "ಗಾಳಿಯ ಬಟ್ಟೆಯೊಳಲೆಯುವೆ, ನಲಿಯುವೆ, ಮುಕ್ತಿಯ ಸೊದೆಯನು ಹೀರಿ" ಎಂದು ಹಾಡುವಾಗ ಅವನ ನಿಜ ಸ್ವಭಾವ ವ್ಯಕ್ತವಾಗುತ್ತದೆ.

## ಬೀಮಣ, ತ್ರಿಶಂಕು, ಶನಿಯ

'ಬಿರುಗಾಳಿ' ನಾಟಕದಲ್ಲಿ ಪ್ರಧಾನ ಪಾತ್ರಗಳಾದ ಭೈರವನಾಯಕ, ಗೌರಾಂಬೆ, ಕಿನ್ನರ ಮೊದಲಾದುವುಗಳನ್ನೇ ಅಲ್ಲದೆ ಕವಿಯು ಸಣ್ಣ ಸಣ್ಣ ಪಾತ್ರಗಳನ್ನೂ ಬಹಳ ಎಚ್ಚರಿಕೆಯಿಂದ ಚಿತ್ರಿಸಿದ್ದಾರೆ. ನಾಟಕದ ಮೊದಲ ದೃಶ್ಯದಲ್ಲಿಯೇ ಬರುವ ಬೀಮಣ ತ್ರಿಶಂಕುಗಳು ಬಹಳ ಸ್ವಾರಸ್ಯವಾದ ವ್ಯಕ್ತಿಗಳು. ಇವರು ರಣನಾಯಕನ ಪರಿವಾರಕ್ಕೆ ಸೇರಿದವರು; ಒಡೆಯನ ಜತೆಯಲ್ಲಿ ದೋಣಿಯಲ್ಲಿ ಪ್ರಯಾಣಮಾಡಿ ಅವರಂತೆ ನೀರಲ್ಲಿ ಮುಳುಗಿ ಕಿನ್ನರನ ಕೃಪೆಯಿಂದ ದಡ ಹತ್ತಿ ಬದುಕಿದವರು. ಮೊದಲ ದೃಶ್ಯದಲ್ಲಿ ಬಿರುಗಾಳಿಯ ರಭಸವನ್ನು ವರ್ಣಿಸಿ ಅದರ ಪ್ರಮಾದಕಾರಿ ಪರಿಣಾಮಗಳನ್ನು ಹೇಳಿ ನಮಗೆ

ಹಿಂದಿನ ಕಥೆಯನ್ನು ಸೂಕ್ಷ್ಮವಾಗಿ ತಿಳಿಸುವ ಈ ಇಬ್ಬರ ಸಂಭಾಷಣೆಯೇ ಈ ನಾಟಕಕ್ಕೆ ಒಂದು ಪ್ರಸ್ತಾವನೆಯಂತೆ ಇದೆ.

ತ್ರಿಶಂಕು ಬಿರುಗಾಳಿಯ ಹೊಡೆತದಿಂದ ಕಂಗೆಟ್ಟು ಹತಬುದ್ಧಿಯಾಗಿದ್ದಾನೆ. ಆ ಮಳೆ ಗಾಳಿ ಚಳಿಗಳಲ್ಲಿ ಅವನ ಪಾಡು ನಾಯಿಪಾಡು. ದ್ವೀಪದ ದಡ ಹತ್ತಿದ್ದರೂ ಅವನಿಗೆ ತಾನು ಬದುಕಿರುವ ವಿಷಯದಲ್ಲಿಯೇ ಸಂದೇಹ. ಇವನಂತೆಯೇ ಬೀಮಣ ಅವನು ಎಲ್ಲೋ ಮದ್ಯ ಸಂಪಾದಿಸಿ ಕೊಂಚ ಉತ್ಸಾಹಿಯಾಗಿದ್ದಾನೆ. ಈ ಇಬ್ಬರ ಪಾಪ ಸಲ್ಲಾಪ ದೊಡ್ಡನಗುವಿನ ಬಿರುಗಾಳಿಯಂತಿದೆ. ಬೀಮಣನ ಪ್ರೇತವೇ ಬಂದು ಮಾತನಾಡುತ್ತಿದೆಯೆಂದು ಭಾವಿಸಿ ತ್ರಿಶಂಕು ಮರಣಭೀತನಾಗಿ ಓಡುವುದು, ಅವನನ್ನು ಹಿಡಿದು ತಂದು ಕೊಂಚ ಹೆಂಡ ಹುಯಿದು ಚೇತನಗೊಳಿಸಿ ಸಂತೈಸುವುದು, ನಗೆಯ ಬುಗ್ಗೆಯಂತಿವೆ. ತಾವು ಇಬ್ಬರೂ ಬದುಕಿರುವುದು ನಿಜವೆಂದು ಖಚಿತವಾದ ಮೇಲೆ ಅವರು ತಮ್ಮ ಒಡೆಯರೇನಾದರೋ ಎಂದು ಯೋಚಿಸಿ ಅವರನ್ನು ಹುಡುಕಲು ಸಂಕಲ್ಪಿಸಿ ದ್ವೀಪವಲ್ಲೆಲ್ಲ ಅಲೆಯಲು ನಿರ್ಧರಿಸುತ್ತಾರೆ.

ನಾವು ಮತ್ತೆ ಬೀಮಣ ತ್ರಿಶಂಕುಗಳನ್ನು ನೋಡುವುದು ಶನಿಯನ ಸಹವಾಸದಲ್ಲಿ. ಆ ದ್ವೀಪದ ಆದಿವಾಸಿಯಂತಿದ್ದ ಶನಿಯನು ಭೈರವನ ಸೇವೆಗೆ ಮನಸ್ಸಿಲ್ಲದೆ ನಿರ್ಬಂಧದಿಂದ ಕೆಲಸ ಮಾಡುತ್ತಿದ್ದ ಒಬ್ಬ ಅರ್ಧ ಮಾನುಷವ್ಯಕ್ತಿ. ಅವನು ತ್ರಿಶಂಕು ತನ್ನ ಕಡೆಗೆ ಬರುತ್ತಿರುವನೆಂದು ಭ್ರಾಂತಿಪಟ್ಟವನಂತೆ ಸತ್ತ ಹಾಗೆ ಬಿದ್ದುಕೊಳ್ಳುತ್ತಾನೆ. ಹೆಂಡ ಕುಡಿದು ಮತ್ತೇರಿ ಬಂದ ತ್ರಿಶಂಕು ಅವನು ಹೊದ್ದಿದ್ದ ಕಂಬಳಿಯಲ್ಲಿ ತೂರಿಕೊಳ್ಳುತ್ತಾನೆ. ತ್ರಿಶಂಕು ಶನಿಯರು ಇಬ್ಬರೂ ಹಾಗೆ ಬಂದು ಕಂಬಳಿಯನ್ನು ಹೊದ್ದು ಬಿದ್ದುಕೊಂಡಿರುವಾಗ ಅಲ್ಲಿಗೆ ಬೇರೆ ದಿಕ್ಕಿನಿಂದ ಬಂದ ಬೀಮಣ ನಾಲ್ಕು ಕಾಲು, ಎರಡು ತಲೆಗಳ ವಿಚಿತ್ರ ಪ್ರಾಣಿ ಯಾವುದಿರಬಹುದೆಂಬ ಕುತೂಹಲದಿಂದ ಶನಿಯನ ಕಾಲು ಹಿಡಿದೆಳೆದು ಎಬ್ಬಿಸುತ್ತಾನೆ. ಅವನು ಇದಾವುದೋ ಪಿಶಾಚ ಭೈರವನ ಆಜ್ಞೆಯಂತೆ ಬಂದು ತನ್ನನ್ನು ಪೀಡಿಸತೊಡಗಿತ್ತೆಂದು ಅಂಜಿ ದಮ್ಮಯ್ಯಗುಡ್ಡೆ ಹಾಕುತ್ತಾನೆ. ಶನಿಯನು ಚಳಿಜ್ವರದಿಂದ ನರಳುತ್ತಿರುವನೆಂದು ತಿಳಿದು ಕನಿಕರಿಸಿ ಅವನಿಗೂ ಕೊಂಚ ಹೆಂಡ ಕುಡಿಸುತ್ತಾನೆ.

ತ್ರಿಶಂಕು ಬೀಮಣರು ಪರಸ್ಪರ ಗುರುತಿಸಿ ಮತ್ತೆ ಮಾತಿಗೆ ತೊಡಗಲು ಶನಿಯನು ಇವರನ್ನು ಕಂಡು ಮೆಚ್ಚಿ ಬೆರಗಾಗುತ್ತಾನೆ. ಆ ವಕ್ರದೇಹಿಗೆ ಇವರು

ಬಂಪರ ದೇವತೆಗಳಂತೆ ತೋರುತ್ತಾರೆ. ಅವನು ಬೀಮಣನನ್ನು "ನೀನು ಸ್ವರ್ಗದಿಂದ ಬಂದೆಯಾ" ಎಂದು ಕೇಳಲು ಅವನು "ಹೌದು, ಸೋಮ ಲೋಕದಿಂದಲೆ ಇಳಿದುಬಂದೆ–ನಿನ್ನೆ ನಾನಲ್ಲಿಯೇ ಇದ್ದೆ" ಎಂದು ಹೇಳುವ ಉತ್ತರ ಬಹಳ ಅರ್ಥವತ್ತಾಗಿದೆ. ಶನಿಯು ಇದನ್ನು ಪರಮ ಸತ್ಯವೆಂದು ಒಪ್ಪಿ ಅವನಿಗೆ ಅಡ್ಡಬಿದ್ದು ದಾಸನಾಗಿ ಭೈರವನ ಮೇಲೆ ತನಗಿದ್ದ ದ್ವೇಷವನ್ನು ತೀರಿಸಿ ಕೊಳ್ಳಲು ಸಮಯ ದೊರಕಿತೆಂದು ನಂಬುತ್ತಾನೆ. ಈ ದೇವಪುರುಷರು ನೀಚ ಭೈರವನನ್ನು ಕೊಂದಾರೆಂದು ಶನಿಯನ ಹೆಬ್ಬಯಕೆ. ಅವನು ತನ್ನ ಸಂಕಟವನ್ನು ಅವರೊಡನೆ ಹೇಳಿಕೊಂಡು, ದ್ವೀಪದ ಒಡೆತನವನ್ನು ಅವರಿಗೆ ಕೊಡಿಸುವುದಾಗಿ ಹೇಳಿ ಅವರನ್ನು ಭೈರವನ ಕೊಲೆಗೆಲಸಕ್ಕೆ ಒಪ್ಪಿಸುತ್ತಾನೆ. ಹೆಂಡ ಕುಡಿದು ಮತ್ತೇರಿ ಮತಿಗೆಟ್ಟು, ಬೀಮಣ ವಿಚಾರವೇನೆಂಬುದು ತಿಳಿಯದೆ ತಾನಾಗಲೇ ದ್ವೀಪದ ಚಕ್ರವರ್ತಿಯೇ ಆಗಿಬಿಟ್ಟೆನೆಂದು ಹಿಗ್ಗಿ ತ್ರಿಶಂಕುವನ್ನು ತನ್ನ ಮಂತ್ರಿ ಯಾಗಿ ನೇಮಿಸುತ್ತಾನೆ. ಆಮೇಲೆ ತ್ರಿಶಂಕು ಬೀಮಣರಿಗೆ ಕೊಂಚ ಜಗಳ ಹುಟ್ಟುತ್ತದೆ. ಅದರಲ್ಲಿ ಅಗೋಚರನಾದ ಕಿನ್ನರನ ಕೈವಾಡವು ಕೊಂಚ ಇದೆ. ಭೈರವನು ಇವರೆದುರಿಗೆ ಕೆಲವು ಹಳೆಯ ಬಟ್ಟೆಗಳೇ ರಾಜಯೋಗ್ಯವಾದ ದಿವ್ಯ ವಸ್ತ್ರಗಳೆಂದು ಭ್ರಮೆಪಟ್ಟು ಇವರಿಬ್ಬರೂ ಹೊಡೆದಾಡುವುದನ್ನು ಕಂಡು ಆ ಶನಿಯುನಿಗೇ ಅಸಹ್ಯ. "ಆ ಚಿಂದಿಗಳಿಗೇಕಿಷ್ಟು ಪರದಾಟ" ಎಂದು ಅವನು ಹೇಳಿದರೂ ಈ ಕುಡುಕರಿಗೆ ಅರಿವಿಲ್ಲ ಕೊನೆಗೆ ಅವರು ಭೈರವ ಮತ್ತು ಕಿನ್ನರರ ಮಾಯಾಜಾಲಕ್ಕೆ ಸಿಕ್ಕು ಕಷ್ಟಪಡುತ್ತಾರೆ.

ಕಡೆಗೆ ಭೈರವನಾಯಕನು ದ್ವೀಪವನ್ನು ಬಿಟ್ಟು ಹೋಗುವ ಮುಂಚೆ ಈ ಮೂವರನ್ನು ಬರಮಾಡಿ ಬೀಮಣ ತ್ರಿಶಂಕುಗಳನ್ನು ರಣನಾಯಕನಿಗೆ ಒಪ್ಪಿಸಿ ಶನಿಯುನನ್ನು ಮನ್ನಿಸುತ್ತಾನೆ. ಆಗ ಆ ಮಂದಬುದ್ಧಿ, ಅರ್ಧ ಮಾನುಷನಾದ ಶನಿಯನು,

"ಕತ್ತೆಗಳಿಗೆಲ್ಲ ನಾನೆಯೆ ಹಿರಿಯ ಹೆಗ್ಗತ್ತೆ.
ಕುಡುಕನಾಗಿರ್ಪ ಈ ಮೂಳನನು ಸಗ್ಗದ
ಹಿರಿಯ ದೇವತೆಯೆಂದೆ ಪೂಜಿಸಿದೆನಲ್ಲಾ"

ಎಂದು ಹೇಳಿಕೊಳ್ಳುವಾಗ ಕೇಳುವ ಪ್ರೇಕ್ಷಕರು ನಗದೆ ಇರಲು ಸಾಧ್ಯವಿಲ್ಲ. ಶನಿಯುನ ಕಣ್ಣಾಗಣದ ದ್ವೇಷ, ಕುಡಿದ ಹೆಂಡದ ಅಮಲು, ಭೈರವನ ಮಂತ್ರ

ವಾಯಿ, ಎಲ್ಲ ಸೇರಿ ಹಾಗೆ ಅವನ ಬುದ್ಧಿ ನಷ್ಟವಾಗಿರಬೇಕು. ದ್ವೇಷಭಾವನೆ ಯಾರ ವಿವೇಚನೆಯನ್ನಾದರೂ ನಾಶಪಡಿಸುತ್ತದೆ. ಅಂದಮೇಲೆ ಇಂಥಾ ಅನಾಗರಿಕ ಅಜ್ಞಾನಿ ಶನಿಯನ ಹೆಚ್ಚಳವೇನು ? ಸುಖಾಂತವಾಗಿ ಮುಗಿದರೂ ವಿಶೇಷ ದುರಂತಚ್ಛಾಯೆಯುಳ್ಳ ಈ 'ಬಿರುಗಾಳಿ'ಯಲ್ಲಿ ಶನಿಯ ಬೀಮಣ ತ್ರಿಶಂಕುಗಳು ತಮ್ಮ ಅವಿವೇಕವರ್ತನೆ ಅಬದ್ಧ ಭಾಷಣಗಳಿಂದ ನಗೆಯ ಹೊಳೆಯನ್ನು ಹರಿಸುತ್ತಾರೆ.

## ಉಪಸಂಹಾರ

ಅದ್ಭುತ ಘಟನಾವಳಿಗಳಿಂದ ಕೂಡಿದ ಮೋಹಕ ಕಥೆ, ಚಮತ್ಕಾರವಾದ ಸನ್ನಿವೇಶ ರಚನೆ, ವಿಭಿನ್ನ ಸ್ವಭಾವಗಳ ಹಲವು ಪಾತ್ರಗಳ ವ್ಯಕ್ತಿತ್ವ ನಿರೂಪಣೆಗಳಿಂದ ಕೂಡಿದ 'ಬಿರುಗಾಳಿ' ಸುಂದರ ರಮ್ಯ ರೂಪಕವಾಗಿದೆ. ಇದರಲ್ಲಿನ ಕಥಾವಸ್ತು ಕೊಂಚವಾದರೂ ಅದನ್ನು ನಿರೂಪಿಸಿರುವ ಕ್ರಮ ಓದುಗರ ಮನಸ್ಸನ್ನು ಸೆರೆ ಹಿಡಿಯುವಂತಿದೆ. ಬೇರೆ ಸಂದರ್ಭಗಳಲ್ಲಿ ಅವಾಸ್ತವಿಕವೆಂದು ತೋರಬಹುದಾದ ಹಲವು ಅದ್ಭುತ ಘಟನೆಗಳು ಇಲ್ಲಿ ಕವಿಯ ಪ್ರತಿಭಾಪೂರ್ಣ ನಿರೂಪಣೆಯಿಂದ ಸತ್ಯವೆನ್ನುವಂತಿವೆ. ಇದರಲ್ಲಿ ಮುಗ್ಧಪ್ರೇಮ, ನೀಚರ ಒಳಸಂಚು, ಧೀರೋದಾತ್ತನ ಹಿರಿಯ ನಡತೆ, ಸೋತವರ ಆಕ್ರೋಶ, ಅತಿಮಾನುಷ, ಅರ್ಧ ಮಾನವ ವ್ಯಕ್ತಿಗಳ ಚಾರಿತ್ರ್ಯವೇ ಅಲ್ಲದೆ ಮಾನವ ವರ್ಗದಲ್ಲಿಯೇ ಉತ್ತಮ ಮಧ್ಯಮಾಧಮ ಮಟ್ಟಗಳ ನಡೆವಳಿಕೆಗಳೂ ತುಂಬಿವೆ. ಆದರೆ ನಾಟಕವನ್ನೆಲ್ಲ ಓದಿ ಮುಗಿಸಿದ ಮೇಲೆ ನಮ್ಮ ಮನಸ್ಸಿನಲ್ಲಿ ಸ್ಥಾಯಿಯಾಗಿ ನಿಲ್ಲುವುದು ಭೈರವನಾಯಕನು ತನ್ನ ಮಗಳನ್ನು ಶಿವನಾಯಕನಿಗೆ ಮದುವೆಮಾಡಿಕೊಟ್ಟು ಏರ್ಪಡಿಸಿದ ದೇವತೆಗಳ ನಾಟ್ಯ ಮುಗಿದ ಮೇಲೆ ಆಡುವ ಮಾತುಗಳು.

"ನೀನು ಕಂಡೀದೃಶ್ಯದಂತೆಯೇ ಸರ್ವವೂ
ವಿಸ್ತಾರವಾದೀ ಸಮಸ್ತ ವಿಶ್ವವು ಕೂಡ,
ಮಾಯೆಯೆಂದರಿಯುವುದು ; ಕನಸೆಂದು ಭಾವಿಪುದು."

ಈ ವಿವೇಕವಿಲ್ಲದೆ ಅರಿಷಡ್ವರ್ಗಗಳ ಉದ್ರೇಕಕ್ಕೆ ಒಳಗಾಗಿ ಈ ಭೂಮಿಯ ಮೇಲಿನ ಬದುಕೇ ಸ್ಥಿರವೆಂದು ಭಾವಿಸಿ ಸ್ವಲಾಭಚಿಂತನೆಯಿಂದ ಅನ್ಯರ ಹಿತಗಳನ್ನು ಅಲಕ್ಷಿಸಿ ನ್ಯಾಯ ನೀತಿಗಳನ್ನು ಬದಿಗೊತ್ತಿ ವ್ಯವಹರಿಸಿದರೆ ಪರಿಣಾಮದಲ್ಲಿ ದುಃಖಸಂಕಟಗಳು ತಪ್ಪವು. ಹಾಗೆ ಮಾಡದೆ ಈ ಲೋಕದ ನಮ್ಮ ಬಾಳ್ವೆ ನಶ್ವರವೆಂದು ತಿಳಿದು ಮದಮತ್ಸರಗಳ ಬಿರುಗಾಳಿಗೆ ಸಿಕ್ಕಿ ಮನಶ್ಶಾಂತಿಯನ್ನು

ಹಾಳುಮಾಡಿಕೊಳ್ಳದೆ ಶಾಂತಿದೇವಿಯನ್ನು ಆರಾಧಿಸಬೇಕು, ಆಶ್ರಯಿಸಬೇಕು. ಆ ದಿವ್ಯ ದೇವಿಯ ಕೃಪೆ ದೊರೆತರೆ ಮನುಷ್ಯ ತೃಪ್ತನಾಗಿ ಹೃಷ್ಟನಾಗಿ ಬಾಳುತ್ತಾನೆ, ಸುಖಿಯಾಗಿರುತ್ತಾನೆ. 'ಬಿರುಗಾಳಿ' ಎಂಬ ಹೆಸರು ಹೊತ್ತು ಬಿರುಗಾಳಿಯ ವೇಗದಲ್ಲಿಯೇ ನಡೆವ ಈ ನಾಟಕ ಮೂಲತಃ ಶಾಂತಿ, ಸಹನೆ, ಅಹಿಂಸೆಗಳ ಹಿರಿಮೆಯನ್ನು ಉಪದೇಶಿಸುತ್ತದೆ.

ಟೆಂಪೆಸ್ಟ್ ನಾಟಕದಲ್ಲಿ ಮನುಷ್ಯನು ಪ್ರಪಂಚ ಮಧ್ಯದಲ್ಲಿ ಮಂಗಳಭಾವದಿಂದಲೂ ಪ್ರೇಮಸಂಬಂಧದಿಂದಲೂ ಆತ್ಮವಿಸ್ತಾರವನ್ನು ಹೊಂದಿ ದೊಡ್ಡವನಾಗುವುದಿಲ್ಲ; ಪ್ರಪಂಚವನ್ನು ಸಂಕೀರ್ಣಮಾಡಿ, ದಮನ ಮಾಡಿ ತಾನು ಅದಕ್ಕೆ ಅಧಿಪತಿಯಾಗಬೇಕೆಂದು ಅಪೇಕ್ಷಿಸುತ್ತಾನೆ. ವಸ್ತುತಃ ಆಧಿಪತ್ಯಕ್ಕೋಸ್ಕರವಾದ ದ್ವಂದ್ವ, ವಿರೋಧ, ಪ್ರಯಾಸಗಳೇ ಟೆಂಪೆಸ್ಟಿನ ಮೂಲಭಾವ. ಅದರಲ್ಲಿ ಪ್ರಾಸ್ಪೆರೋ ಎಂಬುವನು ತನ್ನ ರಾಜ್ಯದ ಅಧಿಕಾರವನ್ನು ಕಳೆದುಕೊಂಡು, ಮಂತ್ರಬಲದಿಂದ ಪ್ರಕೃತಿಯ ರಾಜ್ಯದಮೇಲೆ ಕಠೋರವಾದ ಆಧಿಪತ್ಯವನ್ನು ವಿಸ್ತರಿಸುತ್ತಾನೆ. ಅದರಲ್ಲಿ ಆಸನ್ನ ಮೃತ್ಯುವಿನ ಕೈಯಿಂದ ಹೇಗೋ ಪಾರಾಗಿ ದಡವನ್ನು ಸೇರಿದ ಕೆಲವು ಜನಗಳಲ್ಲಿಯೂ ಈ ಶೂನ್ಯಪ್ರಾಯವಾದ ದ್ವೀಪದಲ್ಲಿ ಆಧಿಪತ್ಯಕ್ಕಾಗಿ ಹಿಂಸೆ ವಿಶ್ವಾಸಘಾತುಕತೆ ಮತ್ತು ಗುಪ್ತವಾಗಿ ಕೊಲೆಮಾಡುವ ಪ್ರಯತ್ನ ಇವುಗಳೇ ಕಂಡುಬರುತ್ತವೆ. ಪರಿಣಾಮದಲ್ಲಿ ಅದರ ನಿವೃತ್ತಿಯೇನೋ ಆಯಿತು, ಆದರೆ ಅಲ್ಲಿಗೇ ಮುಗಿಯಿತೆಂದು ಯಾರೂ ಹೇಳಲಾರರು. ರಾಕ್ಷಸ ಸ್ವಭಾವವು ಭಯದಿಂದಲೂ ಶಾಸನದಿಂದಲೂ ಅವಕಾಶರಾಹಿತ್ಯದಿಂದಲೂ ಪೀಡಿತನಾದ ಕ್ಯಾಲಿಬಿನ್ನಂತೆ ಸ್ತಬ್ಧವಾಗಿಯೇನೋ ಇರುತ್ತದೆ; ಆದರೆ ಅದರ ದಂತಮೂಲದಲ್ಲಿಯೂ ನಖಾಗ್ರದಲ್ಲಿಯೂ ವಿಷವು ಉಳಿದಿರುತ್ತದೆ. ಯಾರು ಯಾವ ಸಂಪತ್ತನ್ನು ಅಪೇಕ್ಷಿಸುತ್ತಾರೋ ಅವರಿಗೆ ಅದು ಸಿಕ್ಕುತ್ತದೆ. ಆದರೆ ಸಂಪತ್ತಿಲಾಭವಾದರೋ ಬಾಹ್ಯಲಾಭ; ಅದು ಅರ್ಥಾಕಾಂಕ್ಷಿಗಳ ಲಕ್ಷ್ಯವಾಗಬಹುದು, ಕಾವ್ಯದ ಚರಮಪರಿಣಾಮವಲ್ಲ. ಟೆಂಪೆಸ್ಟ್ (ಚಂಡಮಾರುತ, ಅಥವಾ ಬಿರುಗಾಳಿ) ನಾಟಕದ ಹೆಸರು ಎಂತಹುದೋ ಅದರೊಳಗಿನ ಕಾರ್ಯಕಲಾಪವೂ ಅಂತಹುದೇ. ಪ್ರಕೃತಿಗೂ ಮನುಷ್ಯನಿಗೂ ವಿರೋಧ, ಮನುಷ್ಯ ಮನುಷ್ಯರಲ್ಲಿ ವಿರೋಧ; ಆ ವಿರೋಧಕ್ಕೆ ಕಾರಣ ಶಕ್ತಿಲಾಭದ ಪ್ರಯತ್ನ; ಇದರ ಆದ್ಯಂತವೂ ಅಶಾಂತಿಮಯವಾದುದು. —**ರವೀಂದ್ರನಾಥ ಠಾಕೂರರು**

['ಬಿರುಗಾಳಿ'ಯಲ್ಲಿ ಕುವೆಂಪು ಅವರ ಮಾರ್ಪಾಟಿನ ಬಗೆಯನ್ನು ಗಮನಿಸಬಹುದು.]

# ಕುಮಾರಸಂಭವ

ಲೇಖಕ: ಎಂ. ವಿ. ಸೀತಾರಾಮಯ್ಯ

## ೧

### ಕವಿ ವಿಚಾರ

ಮಹಾಕವಿ ಕಾಳಿದಾಸನು ಭಾರತದ ಷೇಕ್ಸ್‌ಪಿಯರ್ ಎಂದು ಹೇಳುವುದು ರೂಢಿ. ಆಂಗ್ಲಜನ ಷೇಕ್ಸ್‌ಪಿಯರನನ್ನು ಇಂಗ್ಲೆಂಡಿನ ಕಾಳಿದಾಸ ಎಂದು ಎಲ್ಲಿಯೂ ಹೇಳಿಕೊಂಡಿರುವಂತೆ ಕಂಡುಬಂದಿಲ್ಲ. ಇಂಗ್ಲಿಷ್ ಸಾಹಿತ್ಯ ಪ್ರಪಂಚಕ್ಕೆ ಷೇಕ್ಸ್‌ಪಿಯರ್ ಹೇಗೋ ಹಾಗೆ, ಸಂಸ್ಕೃತ ಮಾತ್ರವಲ್ಲ, ಭಾರತೀಯ ಸಾಹಿತ್ಯ ಪ್ರಪಂಚಕ್ಕೇ ಕಾಳಿದಾಸನು 'ಕವಿಕುಲಗುರು' ಎಂದು ಪ್ರಖ್ಯಾತನಾಗಿದ್ದಾನೆ.

ಕಾಳಿದಾಸನ ದೇಶ ಕಾಲ ಜೀವಿತಗಳಿಗೆ ಸಂಬಂಧಪಟ್ಟ ವಿಚಾರ ತುಂಬ ವಾದಗ್ರಸ್ತವಾಗಿದೆ. ಅವನು ಕಾಶ್ಮೀರ ದೇಶದವನೆಂದು ಕೆಲವರು; ಅವನ ಕೃತಿಗಳಲ್ಲಿ ಉಜ್ಜಯಿನಿಯ ಅಭಿಮಾನ ತುಂಬಿರುವುದರಿಂದ, ಉಜ್ಜಯಿನಿ ಅವನ ಜನ್ಮಸ್ಥಳವೆಂದು ಇನ್ನು ಕೆಲವರು. ಅವನು ಬಂಗಾಳ ದೇಶದವನೆಂದು ಹೇಳುವವರೂ ಇಲ್ಲದಿಲ್ಲ.

ಇನ್ನು ಕಾಲದ ವಿಚಾರ: ಅವನ ಕಾಲ ಕ್ರಿ. ಪೂ. ೧ನೆಯ ಶತಮಾನದಿಂದ ಕ್ರಿ. ಶ. ೧೧ನೆಯ ಶತಮಾನದವರೆಗೂ ತುಯ್ದಾಡುತ್ತಿದೆ. ಕಾಳಿದಾಸನು ವಿಕ್ರಮಾದಿತ್ಯನ ಆಸ್ಥಾನದ ನವರತ್ನಗಳಲ್ಲಿ ಒಬ್ಬನೆಂದೂ ಒಂದು ಪ್ರತೀತಿ. ಇತಿಹಾಸದ ಅನೇಕ ವಿಕ್ರಮಾದಿತ್ಯರಲ್ಲಿ ಇಮ್ಮಡಿ ಚಂದ್ರಗುಪ್ತನೂ (ಕ್ರಿ. ಶ. ೩೫೭ –೪೧೩) ಒಬ್ಬನು. ಉಜ್ಜಯಿನಿ ಇವನ ರಾಜಧಾನಿ. ಇವನು ಕಾಳಿದಾಸನ ಪೋಷಕನಾಗಿರಬಹುದು. ಕಾಳಿದಾಸನು 'ವಿಕ್ರಮೋರ್ವಶೀಯ'ದ ಮೂಲಕ ತನ್ನ ಪೋಷಕನಾದ ವಿಕ್ರಮನ ಪ್ರಾಶಸ್ತ್ಯವನ್ನೂ, 'ಕುಮಾರಸಂಭವ'ದ ಕುಮಾರಸ್ವಾಮಿಯ ನಿಮಿತ್ತದಿಂದ ಅವನ ಮಗನಾದ ಕುಮಾರಗುಪ್ತನ, ಇಲ್ಲವೆ ಮೊಮ್ಮಗನಾದ ಸ್ಕಾಂದಗುಪ್ತನ (ಕುಮಾರಸ್ವಾಮಿಗೆ ಸ್ಕಂದ ಎಂಬ ಹೆಸರೂ ಉಂಟು) ಜನನವನ್ನೂ, 'ಮಾಳವಿಕಾಗ್ನಿಮಿತ್ರ'ದಲ್ಲಿ ಬರುವ ಅಶ್ವಮೇಧಯಾಗದ ಪ್ರಸಕ್ತಿಯಿಂದ ಸಮುದ್ರಗುಪ್ತನ ಅಶ್ವಮೇಧಯಾಗ ವೃತ್ತಾಂತವನ್ನೂ ಕವಿ

ಸೂಚಿಸಿ, ತನಗೆ ಆಶ್ರಯವಿತ್ತ ಗುಪ್ತವಂಶವನ್ನು ಕೀರ್ತಿಸಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಗುಪ್ತರ ಯುಗವು ಸ್ವರ್ಣಯುಗವೆಂದು ಇತಿಹಾಸದಲ್ಲಿ ಪ್ರಸಿದ್ಧವಾಗಿದೆ. ಕಾಳಿದಾಸನ ಕೃತಿಗಳಲ್ಲಿ ಕಾಣಬರುವ ತುಂಬು ಜೀವನ ಅಂತಹ ಸ್ವರ್ಣ ಯುಗದಲ್ಲಿ ಮಾತ್ರ ಸಾಧ್ಯ. ಇನ್ನೂ ಕೆಲವು ಆಂತರಿಕ ಪ್ರಮಾಣಗಳು ಕಾಳಿದಾಸನ ಕಾಲವನ್ನು ಗುಪ್ತರ ಆಳಿಕೆಯಲ್ಲಿ ನಿಲ್ಲಿಸುವಂತಿವೆ. ಇಂತು, ಕಾಳಿದಾಸನ ಕಾಲವು ೪ ಅಥವಾ ೫ನೆಯ ಶತಮಾನವಿರಬಹುದೆಂದು ಕೆಲವು ವಿದ್ವಾಂಸರ ಅಭಿಪ್ರಾಯ.

ಕಾಳಿದಾಸನ ಜೀವಿತದ ವಿಚಾರವಾಗಿ ಕೆಲವು ದಂತಕಥೆಗಳಿವೆ. ಅವನು ಕುರುಬನಾಗಿದ್ದು, ಕಾಳಿಕಾದೇವಿಯ ವರಪ್ರಸಾದದಿಂದ ಕವಿಯಾದನೆಂಬುದು ಅಂಥ ಕಥೆಗಳಲ್ಲಿ ಒಂದು. ಸ್ವಾರಸ್ಯವಾಗಿರಬಹುದಾದ ಇಂಥ ಕಥೆಗಳು ವಿಶ್ವಾಸಾರ್ಹವೆನ್ನುವಂತಿಲ್ಲ.

ಕಾಳಿದಾಸನ ಕೃತಿಗಳೆಂದು ನಿಸ್ಸಂದೇಹವಾಗಿ ನಿರ್ಣಯವಾಗಿರುವವು ಇವು (ರಚನಾಕಾಲಕ್ರಮದಲ್ಲಿ):—[೧] ಋತುಸಂಹಾರ (ಖಂಡಕಾವ್ಯ), (೨) ಮೇಘದೂತ (ಖಂಡಕಾವ್ಯ), (೩) ಕುಮಾರಸಂಭವ (ಮಹಾಕಾವ್ಯ), (೪) ರಘುವಂಶ (ಮಹಾಕಾವ್ಯ).

ನಾಟಕಗಳು: (೧) ಮಾಳವಿಕಾಗ್ನಿಮಿತ್ರ, (೨) ವಿಕ್ರಮೋರ್ವಶೀಯ, (೩) ಶಾಕುಂತಲ.

ಮೇಘದೂತ, ಕುಮಾರಸಂಭವ ಮತ್ತು ಮೂರು ನಾಟಕಗಳು ಶೃಂಗಾರರಸ ಪ್ರಧಾನಗಳಾದ ಕೃತಿಗಳು. ಶಾಕುಂತಲವನ್ನು ಬಿಟ್ಟರೆ, ಇನ್ನುಳಿದ ಈ ಕೃತಿಗಳಲ್ಲಿನ ಶೃಂಗಾರರಸದ ಪ್ರತಿಪಾದನೆ ಕೆಲವೆಡೆಗಳಲ್ಲಿ ಸುಸಂಸ್ಕೃತ ಅಭಿರುಚಿಗೆ ಸ್ವಲ್ಪ 'ಅತಿ' ಯಾಯಿತೆನ್ನಿಸುತ್ತದೆ.

## ಕುಮಾರಸಂಭವ

'ಕುಮಾರಸಂಭವ'ವು ಸಂಸ್ಕೃತ ಸಾಹಿತ್ಯದ ಪ್ರಸಿದ್ಧವಾದ ಐದು ಮಹಾಕಾವ್ಯಗಳಲ್ಲಿ ಒಂದು. ಮಹಾಕಾವ್ಯವೂ ಒಂದು ಕಾವ್ಯಪ್ರಕಾರ. ಅದು ೮ ಸರ್ಗಗಳಿಗೆ ಕಡಮೆಯಿಲ್ಲದಿದ್ದು, ೩೦ ಸರ್ಗಗಳಿಗೆ ಮೀರಿರಕೂಡದು. ಕಾವ್ಯದ ವಸ್ತು 'ಇತಿಹಾಸೋದ್ಭವವೃತ್ತ' [ಎಂದರೆ, ಇತಿಹಾಸಕ್ಕೆ ಸಂಬಂಧಪಟ್ಟ ವೃತ್ತಾಂತ, ಸಂಗತಿ; ಇಲ್ಲಿ ಇತಿಹಾಸವೆಂದರೆ, ಚರಿತ್ರೆ (History) ಎಂದು

ಅರ್ಥವಲ್ಲ; ಲಿಖಿತವಾಗಿರಲಿ, ಇಲ್ಲದಿರಲಿ, ಪರಂಪರಾಗತವಾಗಿ ಪ್ರಸಿದ್ಧವಾದ ಕಥಾ ಸಂದರ್ಭ] ಆಗಿರಬೇಕು. ಕಥೆ ಒಬ್ಬ ನಾಯಕನನ್ನು ಕುರಿತಿರಬಹುದು. ಇಲ್ಲ ಅನೇಕ ರಾಜರ ವಂಶಕಥೆಯನ್ನು ನಿರೂಪಿಸಬಹುದು. ನಾಯಕನು ಒಬ್ಬನಾಗಿರು ಸಂದರ್ಭದಲ್ಲಿ, ಆತನು ದೇವತಾಪುರುಷನೋ ಸದ್ವಂಶದ ಕ್ಷತ್ರಿಯನೋ ಆಗಿದ್ದು ಧೀರೋದಾತ್ತ ಗುಣವನ್ನು ಹೊಂದಿರಬೇಕು. ಮಹಾಕಾವ್ಯದ ಪ್ರಧಾನರಸ ಶೃಂಗಾರ, ವೀರ, ಅಥವಾ ಶಾಂತವಾಗಿರತಕ್ಕದ್ದು; ಇತರ ರಸಗಳು ಪೋಷಕವಾಗಿ ಬರಬಹುದು. ಚತುರ್ವಿಧ ಪುರುಷಾರ್ಥ ಸಾಧನೆಯೇ ಮಹಾಕಾವ್ಯದ ಮುಖ್ಯ ಉದ್ದೇಶ. ಕಾವ್ಯದಲ್ಲಿ ಸತ್‌ಪುರುಷ ಗುಣ ಕೀರ್ತನವೂ ಖಳನಿಂದೆಯೂ ಬರಬೇಕು. ಇಷ್ಟರ ಜೊತೆಗೆ, ಬಹು ಮುಖ್ಯವಾಗಿ,—ಪುರ, ಋತುಗಳು, ಸಮುದ್ರ, ಪರ್ವತ, ಸೂರ್ಯೋದಯ, ಸೂರ್ಯಾಸ್ತ ಮತ್ತು ಚಂದ್ರೋದಯ, ವಿವಾಹ, ಪುತ್ರಜನನ—ಇವೇ ಮುಂತಾದ ಅಷ್ಟಾದಶ (೧೮) ಅಂಗಗಳ ವರ್ಣನೆ ಕಾವ್ಯದ ಒಡಲನ್ನು ಅಲಂಕರಿಸಿರಬೇಕು. ಈ ಕೆಲವು ಮಹಾಕಾವ್ಯದ ಮುಖ್ಯ ಲಕ್ಷಣಗಳು.

'ಕುಮಾರಸಂಭವ'ವು ೧೮ ಸರ್ಗಗಳಲ್ಲಿ ಉಪಲಬ್ಧವಾಗಿರುವುದಾದರೂ, ಕಾಳಿದಾಸನು ಮೊದಲ ೮ ಸರ್ಗಗಳನ್ನು ಮಾತ್ರ ಬರೆದಿರಬೇಕೆಂದು ವಿದ್ವಾಂಸರು ನಿರ್ಧರಿಸಿದ್ದಾರೆ. ಕಾವ್ಯದ ಹೆಸರು ಸೂಚಿಸುವಂತೆ ಕುಮಾರಸಂಭವದ (ಜನನದ) ಸಂಗತಿಯೊಂದಿಗೆ ೮ನೆಯ ಸರ್ಗವು ಮುಗಿಯುತ್ತದೆ. (ಈ ಸಂಬಂಧದ ಚರ್ಚೆ ಇಲ್ಲಿ ಅಪ್ರಕೃತ). ಅಂತೂ, 'ಕುಮಾರಸಂಭವ'ವು ೮ ಸರ್ಗಗಳುಳ್ಳದ್ದೆಂಬುದರಲ್ಲಿ ಸಂದೇಹವಿಲ್ಲ.

ಧೀರೋದಾತ್ತ ಲಕ್ಷಣಗಳುಳ್ಳ ದೇವತಾಪುರುಷ ಶಂಕರನೇ ಕಾವ್ಯದ ನಾಯಕ. ಶಂಕರನ ಗುಣವರ್ಣನೆ ಹಾಗೂ ಬ್ರಹ್ಮನ ಮಹಿಮಾ ಸ್ತೋತ್ರ ಮತ್ತು ಖಳನಾದ ತಾರಕಾಸುರನ ನಿಂದೆ, ಕಾವ್ಯದಲ್ಲಿ ಮುಖ್ಯ ಭಾಗಗಳಾಗಿವೆ. ಕಾವ್ಯದ ಮುಖ್ಯ ರಸ ಶೃಂಗಾರ; ಕರುಣ ಶಾಂತರಸಗಳು ಪೋಷಕಗಳಾಗಿವೆ. ಮೂರನೆಯ ಮತ್ತು ಐದನೆಯ ಸರ್ಗಗಳಲ್ಲಿ ವಿಪ್ರಲಂಭ (ಪ್ರಿಯರ ಅಗಲಿಕೆಯ ಸಂದರ್ಭದ) ಶೃಂಗಾರವೂ, ನಾಲ್ಕನೆಯ ಸರ್ಗದಲ್ಲಿ ಕರುಣ ರಸವೂ ಮುಖ್ಯವಾಗಿ ಪ್ರತಿಪಾದಿತವಾಗಿವೆ. ಮೊದಲನೆಯ ಸರ್ಗದಲ್ಲಿ ಹಿಮಾಲಯ ಪರ್ವತದ ವರ್ಣನೆ, ಮೂರನೆಯದರಲ್ಲಿ ಅದರ ತಪ್ಪಲ ವನದ ಹಾಗೂ ವಸಂತೋದಯದ ವರ್ಣನೆಗಳು, ಏಳನೆಯ ಸರ್ಗದಲ್ಲಿ, ಹಿಮಾಲಯದ ರಾಜಧಾನಿಯ ವರ್ಣನೆ ಮತ್ತು ವಿವಾಹ

ವರ್ಣನೆ, ಎಂಟನೆಯದರಲ್ಲಿ ಪುತ್ರ ಜನನದ ವರ್ಣನೆ, ಹೀಗೆ, 'ಕುಮಾರಸಂಭವ'ವು ಮಹಾಕಾವ್ಯ ಲಕ್ಷಣಗಳಿಗೆ ಅನುಗುಣವಾಗಿದೆ.

### ಕಾವ್ಯ ಕಥೆಯ ಮೂಲ

'ಕುಮಾರಸಂಭವ'ದ ಕಥೆ ಕವಿಕಲ್ಪಿತವಲ್ಲ. ಮಹಾಕಾವ್ಯ ಲಕ್ಷಣಾನುಸಾರವಾಗಿ ಅದು 'ಇತಿಹಾಸೋದ್ಭವವೃತ್ತ'. ತಾರಕಾಸುರನ ಉಪಟಳ, ಅವನ ಸಂಹಾರಾರ್ಥವಾಗಿ ಕಾರ್ತಿಕೇಯನ (ಕುಮಾರಸ್ವಾಮಿಯ) ಜನನ–ಈ ಕಥಾಸಂದರ್ಭ ರಾಮಾಯಣ, ಮಹಾಭಾರತಗಳಲ್ಲಿಯೂ ಕೆಲವು ಪುರಾಣ (ಸೌರಪುರಾಣ, ಸ್ಕಾಂದಪುರಾಣ, ಶಿವಪುರಾಣ ಇತ್ಯಾದಿ) ಗಳಲ್ಲಿಯೂ ನಿರೂಪಿತವಾಗಿದೆ. ರಾಮಾಯಣ ಭಾರತಗಳಲ್ಲಿ ಹೇಳಿರುವ ಕಥೆಗೂ, 'ಕುಮಾರಸಂಭವ'ದ ಕಥೆಗೂ ಬಹಳ ವ್ಯತ್ಯಾಸವಿದೆ.

ಆದರೆ, ಶಿವಪುರಾಣದಲ್ಲಿ ಉಕ್ತವಾಗಿರುವ ಕಥೆಗೂ 'ಕುಮಾರ ಸಂಭವದ' ಕಥೆಗೂ ಬಹಳ ಹತ್ತಿರದ ಹೋಲಿಕೆಯಿದೆ. ಈ ಕಾರಣ, ಕಾಳಿದಾಸನು ಶಿವಪುರಾಣದಿಂದ ತನ್ನ ಕಾವ್ಯವಸ್ತುವನ್ನು ಸ್ವೀಕರಿಸಿ, ತನ್ನ ಪ್ರತಿಭಾಶಕ್ತಿಯಿಂದ ಅದನ್ನು ಸುಂದರವಾದ ಮಹಾಕಾವ್ಯವಾಗಿ ವಿಸ್ತರಿಸಿ ನಿರೂಪಿಸಿರುವನೆಂದು ಊಹಿಸಲು ಅವಕಾಶವಿದೆ.

ಪುರಾಣಗಳೆಲ್ಲ ಈಚಿನವು. ಶಿವಪುರಾಣದಲ್ಲಿನ ಕುಮಾರಸ್ವಾಮಿಯ ಕಥಾಭಾಗವು ಕಾಳಿದಾಸನ ಕಾವ್ಯವನ್ನೇ ಅನುಸರಿಸಿ ಬರೆದದ್ದು ಎಂಬುದಾಗಿಯೂ ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಕಾಳಿದಾಸನ 'ಶಾಕುಂತಲ'ದ ಮೂಲಕಥೆ ಮಹಾಭಾರತದ್ದು ಎಂದ ಮಾತ್ರಕ್ಕೆ ಆ ನಾಟಕದ ಶ್ರೇಷ್ಠತೆಗೆ ಹೇಗೆ ಕುಂದುಬಾರದೋ ಹಾಗೆಯೇ 'ಕುಮಾರ ಸಂಭವ'ದ ಕಥಾಸರಣಿ ಶಿವಪುರಾಣದ್ದು ಎಂದದ್ದರಿಂದ ಕೂಡ ಕಾವ್ಯದ ಅಗ್ಗಳಿಕೆಗೆ ಊನಬಾರದು. ಅಕ್ಕಸಾಲೆಯ ಕೈವಾಡದ ಹಿರಿಮೆ ಆಭರಣ ನಿರ್ಮಾಣ ಕೌಶಲದಲ್ಲಿ ಅಡಗಿದೆಯೇ ವಿನಾ, ಅವನಿಗೆ ಚಿನ್ನದ ಗಟ್ಟಿ ಎಲ್ಲಿ ಸಿಕ್ಕಿತೆಂಬ ಅಂಶದಲ್ಲಿ ಅಲ್ಲ. ಆದ್ದರಿಂದ, 'ಕುಮಾರ ಸಂಭವ'ವು ಶಿವಪುರಾಣದ ಕಥೆಯ ಆಧಾರದ ಮೇಲೆ ರಚಿತವಾದದ್ದು ಎಂಬ ವಾದದ ಕಡೆಗೆ ಒಲಿದರೂ, ಕಾವ್ಯದ ಮೇಲ್ಮೆಗೆ ಬಾಧಕವಾಗದು.

### ಕಥೆಯ ಹಂದರ

'ಕುಮಾರ ಸಂಭವ'ದ ಮೊದಲ ಐದು ಸರ್ಗಗಳ ಕಾವ್ಯ ಕಥೆಯ ಐದು

ಪ್ರಕರಣನ್ನು ಹಂತಹಂತವಾಗಿ ಈ ಮುಂದೆ ಕಂಡಂತೆ ವಿಭಜನೆ ಮಾಡಿಕೊಳ್ಳ ಬಹುದು.

### ಸರ್ಗ ೧ : ಪಾರ್ವತಿಯ ಜನನ

ಹಿಮಾಲಯ ಪರ್ವತ ಸ್ವರೂಪ-ಸೌಂದರ್ಯ-ಮಹಿಮಾ ವರ್ಣನೆ (ಪದ್ಯಗಳು ೧-೧೭); ಹಿಮವಂತ ಮೇನಾದೇವಿಯರ ಮದುವೆ, ಪುತ್ರ ಮೈನಾಕನ ಜನನ (೧೮-೨೦); ಪಾರ್ವತಿಯ ಸತೀ ಜನ್ಮವೃತ್ತಾಂತ (೨೧); ಪಾರ್ವತಿಯ ಜನನ (೨೨-೨೪), ಅವಳ ಬಳವಿ, ಅವಳ ಹೆಸರಿನ ಸಾರ್ಥಕತೆ, ಮಗಳ ಬಗೆಗೆ ಪಿತನ ಹೆಮ್ಮೆ, ಸಂತೋಷ (೨೫-೨೮); ಅವಳ ಬಾಲ್ಯಲೀಲೆ, ಸಹಜ ವಿದ್ಯಾಪ್ರಾಪ್ತಿ (೨೯-೩೦); ಅವಳ ಯೌವನೋದಯ (೩೧-೩೨); ಗಿರಿಜೆಯ ನಖಶಿಖಾಂತ (ಎಂದರೆ, ಅಡಿಯಿಂದ ಮುಡಿಯವರೆಗಿನ, ಸಮಗ್ರ) ಸೌಂದರ್ಯ ವರ್ಣನೆ (೩೩-೪೯.)

ನಾರದನ ಆಗಮನ, ಗಿರಿಜೆ ಈಶನ ಭಾವೀ ವಧುವೆಂಬ ನಾರದ ವಾಕ್ಯ, ಪಿತನ ಚಿಂತೆ (೫೦-೫೨); ತಪಸ್ಸಿಗಾಗಿ ಹಿಮಗಿರಿಗೆ ಭಾರ್ಯಾವಿಯೋಗಿಯಾದ ಪಶುಪತಿಯ ಆಗಮನ, ಪ್ರಮಥಗಣ ಪರಿವಾರ, ಈಶವಾಹನ ನಂದಿಯ ದರ್ಪಕಲರವ (೫೩-೫೬), ತಪೋನಿಷ್ಠನಾದ ಅಷ್ಟಮೂರ್ತಿ (೫೭), ಗಿರಿರಾಜನಿಂದ ಈಶ್ವರಾರ್ಚನೆ, ಈಶ್ವರಾರಾಧನೆಗೆ ಮಗಳ ನೇಮಕ (೫೮); ಉಮೆಯ ಶುಶ್ರೂಷೆಗೆ ಗಿರೀಶನ ಸಮ್ಮತಿ (೫೯); ಗಿರಿಜೆಯ ಗಿರೀಶಾರ್ಚನೆ (೬೦.)

### ಸರ್ಗ ೨ : ಬ್ರಹ್ಮನಲ್ಲಿ ದೇವನಿಯೋಗ

ಬ್ರಹ್ಮನೆಡೆಗೆ ದೇವತೆಗಳ ಆಗಮನ, ಬ್ರಹ್ಮದರ್ಶನ (೧-೩; ಬ್ರಹ್ಮ ಸ್ತೋತ್ರ (೪-೧೫); ಸುಪ್ರಸನ್ನನಾದ ಬ್ರಹ್ಮ (೧೬-೧೭); ದೇವತೆಗಳ ಮೊಗ ಬಾಡಿರುವುದಕ್ಕೆ, ಅವರು ಹತವೀರ್ಯರಾಗಿರುವುದಕ್ಕೆ, ಅವರ ಮನೋವ್ಯಾಕುಲಕ್ಕೆ, ಕಾರಣವೇನೆಂದು, ಬ್ರಹ್ಮನ ಪ್ರಶ್ನೆ (೧೮-೨೮); ಇಂದ್ರನ ಪ್ರೇರಣೆಯಂತೆ ಬ್ರಹ್ಮನಲ್ಲಿ ಬೃಹಸ್ಪತಿಯ ಅರಿಕೆ (೨೯-೩೦); ಲೋಕಕಂಟಕ ತಾರಕಾಸುರನ ಕೋಟಲೆಯ ವಿವರಣೆ (೩೧-೪೭); ತಾರಕನೆದುರು ದೇವತೆಗಳ ವ್ಯರ್ಥ ಪ್ರತೀಕಾರ ಪ್ರಯತ್ನ (೪೮-೫೦); ತಾರಕಾಸುರನನ್ನು ಜಯಿಸಲು ಇಂದ್ರನಿಗೆ ಸುರಸೈನ್ಯ ರಕ್ಷಕನಾದ ಸೇನಾಪತಿ ಅವಶ್ಯವೆಂಬ ಪ್ರಾರ್ಥನೆ (೫೦-೫೨).

ಬ್ರಹ್ಮವಚನ: ತನ್ನಿಂದ ಸೃಷ್ಟಿ ಸಾಧ್ಯವಿಲ್ಲ, ತನ್ನಿಂದ ತಾರಕ ಸಂಹಾರ ಯೋಗ್ಯವಲ್ಲ, ಅದು ಈಶ್ವರ ಕುಮಾರನಿಂದ ಮಾತ್ರ ಸಾಧ್ಯ, ಹರನ ಮಹಿಮಾ

ಪ್ರಶಂಸೆ, ಶಂಭುವಿನ ತಪಸ್ಸನ್ನು ಉಮೆಯ ಸೌಂದರ್ಯದಿಂದ ಸೆಳೆಯಬಹುದೆಂಬ ಸೂಚನೆ, ಶಿವಕುಮಾರನಿಂದ ದೇವತೆಗಳ ಇಷ್ಟಾರ್ಥ ಸಿದ್ಧಿಯಾಗುವುದೆಂಬ ಆಶ್ವಾಸನ (೫೩–೬೧); ದೇವತೆಗಳು ಬ್ರಹ್ಮಸನ್ನಿಧಿಯಿಂದ ಹಿಂದಿರುಗಿದ ಮೇಲೆ, ಈಶ್ವರನ ತಪೋಭಂಗ ಕಾರ್ಯಕ್ಕೆ ಮನ್ಮಥ ತಕ್ಕವನೆಂದು ಇಂದ್ರನ ನೆನಕೆ, ಇಂದ್ರನ ಸನ್ನಿಧಿಗೆ ಮನ್ಮಥನ ಆಗಮನ. (೬೨–೬೪)

## ಸರ್ಗ ೩: ಮದನ ದಹನ

ಇಂದ್ರ ಮದನ ಸಂವಾದ (೧–೨೨): ಮದನನಿಗೆ ಇಂದ್ರನ ಮನ್ನಣೆ (೧–೨); ಮದನನ ವಿಜೃಂಭಣೆ: ತನ್ನ ಪ್ರತಾಪವನ್ನು ಕೊಚ್ಚಿಕೊಂಡು, ಪಿನಾಕ ಪಾಣಿಯಾದ ಹರನನ್ನು ಬೇಕಾದರೂ ವಸಂತನ ನೆರವಿನಿಂದ ಧೈರ್ಯಗೆಡಿಸ ಬಲ್ಲೆನೆಂದು ಇಂದ್ರನಿಗೆ ತನ್ನ ಸಹಾಯ ಭರವಸೆ ಕೊಟ್ಟದ್ದು (೩–೧೦); ಇಂದ್ರ ನಿಂದ ಮದನ ಪರಾಕ್ರಮ ಪ್ರಶಂಸೆ (೧೨–೧೩), ಮದನನ ಕರ್ತವ್ಯ ವಿವರಣೆ, ಪುನಃಪ್ರಶಂಸೆ (೧೪–೨೨.)

ಹರನ ಹೈಮಾಶ್ರಮಕ್ಕೆ ರತಿವಸಂತರೊಂದಿಗೆ ಮದನನ ಆಗಮನ (೨೩–೨೪); ರತಿಸಹಿತ ಮದನ–ವಸಂತರ ಪ್ರಭಾವ: ಅಕಾಲ ವಸಂತೋದಯ; ವಸಂತಋತು ವರ್ಣನೆ, ಚರಾಚರ ದ್ವಂದ್ವ (ಜೋಡಿ) ಗಳಲ್ಲಿ ರತಿಭಾವಾಂಕುರ, ಹರ ತಪೋವನದ ತಾಪಸೋತ್ತಮರ ಚಿತ್ತ ಚಾಂಚಲ್ಯ (೨೫–೪೦).

ಗಣಗಳ ಚಂಚಲತೆಯನ್ನು ಕಂಡು ನಂದಿಯ ಆಜ್ಞೆ, ಅದರ ಪರಿಣಾಮ (೪೨–೪೩); ಭೂತಪತಿ (ಈಶ್ವರ)ಯಾಶ್ರಮಕ್ಕೆ ಮದನನ ಪ್ರವೇಶ, ತಪೋನಿಷ್ಠ ನಾದ ಈಶ್ವರನ ದರ್ಶನ (೪೪–೪೫); ತಪೋನಿರತ ಹರನ ವರ್ಣನೆ (೪೬–೫೧).

ಹರನನ್ನು ಕಂಡು ಮದನನ ಭೀತಿ, ಅವನ ಸತ್ತ್ವಭಂಗ, ಪಾರ್ವತಿಯ ಆಗಮನ (೫೧–೫೨); ಅವಳ ಸೌಂದರ್ಯ, ಅಲಂಕಾರ (೫೩–೫೬); ಅವಳನ್ನು ಕಂಡಮೇಲೆ ಮದನನ ಧೈರ್ಯ (೫೭)

ಗಿರಿಜೆ ಈಶ್ವರನ ಸನ್ನಿಧಿಗೆ ಬಂದ ವೇಳೆಯಲ್ಲಿ ಅವನು ಎಚ್ಚರಗೊಂಡದ್ದು, ಬಹಿರ್ಮುಖನಾದದ್ದು, ಗಿರಿಜೆ ಸೇವೆಗಾಗಿ ಬಂದಿರುವಳೆಂದು ನಂದಿಯ ಬಿನ್ನಹ, ಹರನ ಸಮ್ಮತಿ (೫೮–೬೦); ಗಿರಿಜೆಯ ಸಖಿಯರಿಂದ ಈಶ್ವರಾರ್ಚನೆ, ಹರನಡಿ ಗಳಿಗೆ ಉಮೆಯ ನಮಸ್ಕಾರ, ಈಶ್ವರನ ಆಶೀರ್ವಾದ (೬೧–೬೩).

ಗಿರಿಜೆಯಿರುವುದು ಸಕಾಲವೆಂದರಿತ ಮದನನಿಂದ ಧನುಷ್ಟಂಕಾರ (೬೪), ಗೌರಿಯಿಂದ ಈಶ್ವರನಿಗೆ ಜಪಮಾಲೆಯ ಅರ್ಪಣೆ (೬೫), ಅದನ್ನು ಅವನು

ಸ್ವೀಕರಿಸಹೋದಾಗ ಮದನನು ಪುಷ್ಪಬಾಣವನ್ನು ಹೂಡಿದ್ದು (೬೬), ಆಗ ಹರನೂ ಕೂಡ ತುಸ ಮಾತ್ರ ಚಂಚಲಚಿತ್ತನಾಗಿ ಉಮೆಯನ್ನು ದೃಷ್ಟಿಸುತ್ತಿರು ವಂದು ಅವಳು ಆಕರ್ಷಕಳಾಗಿ ಕಂಡ ಬಗೆ (೬೭–೬೮).

ತನ್ನ ಚಿತ್ತ ಚಾಂಚಲ್ಯಕ್ಕೆ ಕಾರಣವೇನೆಂದು ಹರನು ಸುತ್ತ ಕಣ್ಣು ಹರಿಸಿದಾಗ, ಆಕರ್ಣಾಂತವಾಗಿ ಬಾಣ ಸೆಳೆದು ಹೊಡೆಯಲನುವಾಗಿದ್ದ ಮನ್ಮಥ ಗೋಚರನಾದದ್ದು (೬೯–೭೦); ತಪೋಭಂಗದಿಂದ ಕೋಪಗೊಂಡ ಹರನ ಹಣೆಗಣ್ಣಿನಿಂದ ಅಗ್ನಿಯ ಉತ್ಪತ್ತಿ, ಮದನ ದಹನ (೭೧–೭೨); ರತಿಯ ಮೂರ್ಛೆ (೭೩); ಸ್ತ್ರೀ ಸಾನ್ನಿಧ್ಯವನ್ನೇ ತೊರೆಯಲಿಚ್ಛಿಸಿ ಹರನ ಅಂತರ್ಧಾನ (೭೪). ಗಿರಿಜೆಯ ನಿರಾಶೆ, ದುಃಖ, ಲಜ್ಜೆ, ಮನೆಗೆ ಮರಳುವ ಇಚ್ಛೆ, ಹಿಮವಂತನು ಅವಳನ್ನು ಕರೆದೊಯ್ದುದ್ದು (೭೫–೭೬).

## ಸರ್ಗ: ೪ ರತಿ ವಿಲಾಪ

ಮೂರ್ಛೆಯಿಂದ ಎಚ್ಚತ್ತ ರತಿ ತನ್ನ ಪ್ರಿಯನನ್ನು ಕಾಣದೆ, ಹುಡುಕು ನೋಟದಿಂದ ನೋಡಿದಾಗ ಮದನನ ಭಸ್ಮರೂಪ ಕಂಡದ್ದು (೧–೩); ಧೂಳಿನಲ್ಲಿ ಹೊರಳಾಡಿ ರೋದಿಸತೊಡಗಿದ್ದು (೪).

ತಮ್ಮಿಬ್ಬರ ಪ್ರೇಮದ ಬೆಸುಗೆಯನ್ನು ನೆನೆನೆನೆದು, ಮದನನು ತನ್ನನ್ನು ಅಗಲಿ ಹೋಗಲು ಕಾರಣವೇನು, ತನ್ನ ಹೃದಯಸ್ಥನೆನಿಸಿದ ಅವನು ತನ್ನನ್ನು ಅಗಲಿ ತಾನು ಮಾತ್ರ ಹಿಂದುಳಿದಿರಲು ಕಾರಣವೇನು–ಎಂದು ರತಿಯ ಆರ್ತಪ್ರಶ್ನೆ (೫–೯); ಮದನನು ಇನ್ನಿಲ್ಲವಾದುದರಿಂದ ಅಬಲಾಜನಕ್ಕೆ, ಪ್ರಮದೆಯರಿಗೆ, ಚಂದ್ರನಿಗೆ, ಪಂಚಬಾಣಗಳಲ್ಲಿ ಒಂದನ್ನು ಒದಗಿಸುವ ಚೂತ(ಮಾವಿನ) ವೃಕ್ಷಕ್ಕೆ, ಮದನನ ಬಿಲ್ಲಿನ ಮೌರ್ವಿ (ಹೆದೆ)ಯೆನಿಸಿದ ದುಂಬಿಸಾಲಿಗೆ–ಒದಗಿದ ನಷ್ಟ, ಶೋಕ [ಮದನನ ಅವಸಾನದಿಂದ ತಾನು ಮಾತ್ರವಲ್ಲ, ಇಡೀ ಪ್ರಪಂಚವೇ ದೈವವಂಚಿತವಾಗಿ ದುಃಖಭಾಜನವಾಗಿದೆ ಎಂದು ರತಿಯ ವ್ಯಥೆ] (೧೦–೧೫); ಮರಳಿ ಮೈದೋರಿ ಕೋಗಿಲೆಯನ್ನು ಪ್ರೇಮದೂತಿಯಾಗಿ ಮಾಡೆಂದು ಮದನನಿಗೆ ಕರೆ (೧೬); ಮದನನನೊಂದಿಗೆ ಇದ್ದಾಗ ತಾನು ಸವಿದ ಸುಖದ ಸ್ಮರಣೆಯಿಂದ ಶಾಂತಿ ದೊರಕದು, ಅವನಿತ್ತ ಹೂವಿನೊಡವೆಗಳಿದ್ದರೂ ಅವನಿಲ್ಲ, ಅವನು ತೆರಳಿ ದಾಗ ಅರ್ಧಕ್ಕೆ ಬಿಟ್ಟಿದ್ದ ತನ್ನ ಪಾದದ ಅಲಂಕರಣ ಕಾರ್ಯವನ್ನು ಪೂರ್ತಿಮಾಡಲು ಬರಬೇಕೆಂದು ಮದನನಲ್ಲಿ ಮೊರೆ (೧೭–೧೯); ಅಗ್ನಿಪ್ರವೇಶ ಮಾಡಿ ಸ್ವರ್ಗಕ್ಕೆ ಪತಿಯನ್ನು ಹಿಂಬಾಲಿಸುವ ಬಯಕೆ, ಹಿಂದುಳಿದರೆ ಲೋಕನಿಂದೆಗೆ ಗುರಿಯಾಗುವ

ನೆಂಬ ಶಂಕೆ (೨೦–೨೧); ಮದನನ ದೇಹಪ್ರಾಣಗಳೆರಡೂ ಬಳಿಯಲ್ಲಿಲ್ಲದಿರುವಾಗ, ಅಂತ್ಯಕ್ರಿಯೆಗೆ ಮುನ್ನ ಅವನ ದೇಹಕ್ಕೆ ಹೇಗೆ ಕಡೆಯ ಅಲಂಕಾರ ಮಾಡುವುದು ಎಂಬ ಪ್ರಶ್ನೆ (೨೨); ವಸಂತನೊಡನೆ ಮದನನ ನಗೆಮಾತು, ಆಗ ತನ್ನ ಕಡೆಗೆ ಮದನನ ಕಡೆಗಣ್ಣೋಟ – ಇವನ್ನು ನೆನೆದು, ಆ ಮಧುವೆಲ್ಲಿ? ಅವನಿಗೂ ಮದನನ ಗತಿಯೇ ಸಮನಿಸಿತೆ? ಎಂದು ರತಿಯ ಶಂಕೆ (೨೩–೨೪); ನಂಜಿನ ಬಾಣದಂತಹ ಈ ನಾಟುನುಡಿಗಳನ್ನು ಕೇಳಿ, ದುಃಖಾರ್ತಳಾದ ರತಿಯನ್ನು ಸಂತೈಸಲು ಮಧು ವೈದೋರಿ ಎದುರು ನಿಲ್ಲಲು, ಅವಳ ದುಃಖ ಇನ್ನೂ ಹೆಚ್ಚು ವುದು (೨೫–೨೬); ರತಿ ಮಾಧವನಿಗೆ ತನ್ನ ಪತಿಯದಾಗಿ ಉಳಿದಿರುವ ಬೂದಿಯ ಆಕೃತಿಯನ್ನು ತೋರಿಸಿ (೨೭), ತನಗಲ್ಲದಿದ್ದರೂ ಗೆಳೆಯ ಮಧುವಿಗಾದರೂ ದರ್ಶನ ಕೊಡಬೇಕೆಂದು ಪತಿಯನ್ನು ಬೇಡಿ (೨೮), ವಸಂತನು ಮದನನಿಗೆ ಸದಾ ನೆರವಾಗಿದ್ದ ಪರಿಯನ್ನು ಸ್ಮರಿಸಿ (೨೯), ಮದನ ಮರಣದಿಂದ ತನಗಾಗಿರುವ ದುರ್ಗತಿಯನ್ನು ಕುರಿತು ಹಲುಬುವಳು (೩೦–೩೧); ಬಳಿಕ ತನಗೆ ಒಂದು ಚಿತೆ ಯನ್ನೇರ್ಪಡಿಸಿ ತನ್ನನ್ನು ಪತಿಯ ಸನ್ನಿಧಿಗೆ ಸೇರಿಸಬೇಕೆಂದೂ, ಆ ಚಿತೆಯೆ ತನಗೆ ಹೂವಿನ ಹಾಸಿಗೆಗೆ ಸಮನಾಗಿರುವುದೆಂದೂ ವಸಂತನಿಗೆ ತಿಳಿಸಿ (೩೨–೩೬), ಅವನು ಅರ್ಪಿಸುವ ಜಲತರ್ಪಣವನ್ನು ಮದನನೂ ತಾನೂ ಒಂದಿಗೆ ಪರಲೋಕದಲ್ಲಿ ಸ್ವೀಕರಿಸುವುದಾಗಿ ಹೇಳುವಳು (೩೭–೩೮); ಆಗ ಒಂದು ಆಕಾಶವಾಣಿ ಕೇಳಿ ಬರುವುದು: ರತಿ ನಿರಾಶಳಾಗಬೇಕಾಗಿಲ್ಲವೆಂದೂ, ತನ್ನ ಪತಿಯನ್ನು ಮರಳಿ ಹೊಂದಲಿರುವಳೆಂದೂ, ಮದನನಿಗೆ ಒದಗಿದ ಈ ವಿಪತ್ತು ಬ್ರಹ್ಮನ ಶಾಪದ ಫಲವೆಂದೂ, ಶಿವ ಪಾರ್ವತಿಯರ ವಿವಾಹವಾದಾಗ ಶಾಪನಿವೋಜನೆಯಾಗಿ ರತಿ ಮದನರ ಪುನಸ್ಸಮಾಗಮವಾಗುವುದೆಂದು ಬ್ರಹ್ಮವಚನವಿದೆಯೆಂದೂ, ಅದರಿಂದ ರತಿ ಮದನನ ದಗ್ಧಶರೀರವನ್ನು ಕಾಪಿಡಬೇಕೆಂದೂ ಆಕಾಶವಾಣಿ ತಿಳಿಸುವುದು (೩೯–೪೪); ಈ ಅಗೋಚರ ಶಕ್ತಿಯ ವಚನ, ವಸಂತನ ಸಂತೈಕೆಯ ಮಾತು– ಇವುಗಳಿಂದ ರತಿಯ ದುಃಖ ಶಮನಗೊಂಡು, ಅದು ಕೊನೆಗೊಳ್ಳುವ ಶುಭ ದಿನವನ್ನು ನಿರೀಕ್ಷಿಸುತ್ತಿರುವಳು.

### ಸರ್ಗ ೫: ತಪಃಫಲೋದಯ

ಮದನ ದಹನವನ್ನು ಕಣ್ಣೆದುರು ಕಂಡ ಗಿರಿಜೆ ತನ್ನ ವ್ಯರ್ಥವಾದ ಚೆಲುವನ್ನು ನಿಂದಿಸಿಕೊಂಡು, ತಪಸ್ಸಿನ ಮೂಲಕ ಈಶ್ವರನನ್ನು ಪಡೆಯಲು ನಿರ್ಧರಿಸುವಳು (೧–೨); ಮಗಳ ನಿಶ್ಚಯವನ್ನರಿತ ಮೇನೆ, ಕೋಮಲ ಶರೀರೆಯಾದ ಅವಳಿಗೆ

ತಪಸ್ಸು ಯೋಗ್ಯವಲ್ಲವೆಂದು ಎಷ್ಟು ವಿಧವಾಗಿ ಹೇಳಿದರೂ ಮಗಳ ಅಪೇಕ್ಷೆಯನ್ನು ತಡೆಗಟ್ಟಲಾರದೆ ಹೋಗುವಳು (೩–೫); ಗಿರಿಜೆ ತಪಸ್ಸಿಗಾಗಿ ವನಕ್ಕೆ ಹೋಗಲು ತಂದೆಯ ಅಪ್ಪಣೆಯನ್ನು ಪಡೆದು, ಹಿಮಾಲಯದ ಶಿಖರ ಪ್ರಾಂತಕ್ಕೆ ತೆರಳುವಳು (೬–೭); ತಪಸ್ಸಿಗೆ ತೊಡಗಿದ ಗಿರಿಜೆಯ ವೇಷಭೂಷಣಗಳಲ್ಲಿ ಮಾರ್ಪಾಟು; ಹಾರದೆಡೆಯಲ್ಲಿ ನಾರುಡೆ, ಅಲಂಕಾರವಿಲ್ಲದ ಜಟೆ, ಕಾಂಚೀದಾಮದೆಡೆಯಲ್ಲಿ ಹುಲ್ಲಿನ ಮೌಂಜಿ (೮–೧೦); ಅಲತಿಗೆಯನ್ನು ಬಳಿವ ಕೈ ದರ್ಭೆಯ ಹುಲ್ಲು ಕೊಯ್ಯುವುದಕ್ಕಾಗಿದೆ (೧೧); ಮೃದುವಾದ ಹಾಸಿನಲ್ಲಿ ಮಲಗುವವಳು ನೆಲದ ಮೇಲೆ ಕೂರುವಳು, ಮಲಗುವಳು (೧೨); ತನ್ನ ಲೀಲಾವಿಲಾಸಗಳನ್ನು ತ್ಯಜಿಸಿದಳು (೧೩); ಪುತ್ರವಾತ್ಸಲ್ಯದಿಂದ ವೃಕ್ಷಗಳನ್ನು ಬೆಳಸತೊಡಗಿದಳು (೧೪); ವನದ ಜಿಂಕೆಗಳೊಡನೆ ಗಾಢಸ್ನೇಹ (೧೫); ತಪೋನಿರತ ಗಿರಿಜೆಯನ್ನು ನೋಡಲು ಋಷಿಗಳೇ ಬಂದರು (೧೬); ಅವಳ ತಪಃಪ್ರಭಾವದಿಂದ ತಪೋವನ ಪಾವನವಾಯಿತು (೧೭); ಈ ಬಗೆಯ (ಸಾಮಾನ್ಯ) ತಪಸ್ಸಿನಿಂದ ಫಲ ದೊರಕದೆ, ಇನ್ನೂ ಉಗ್ರತರ ತಪಸ್ಸಿಗೆ ತೊಡಗುವಳು (೧೮); ಅವಳ ಘೋರ ತಪಸ್ಸಿನ ವರ್ಣನೆ: ಉರಿ ಬೇಸಿಗೆಯಲ್ಲಿ ಪಂಚಾಗ್ನಿಯ ನಡುವೆ ತಪವಿದ್ದೂ ಕುಂದಲಿಲ್ಲ; ವೃಕ್ಷಗಳ ಹಾಗೆ, ತಾನಾಗಿ ಬಳಿಸಾರಿದ ನೀರು ಮತ್ತು ಚಂದ್ರಕಿರಣ—ಇವೇ ಅವಳ ಉಪವಾಸ ಪಾರಣೆಯ ಆಹಾರ; ಮಳೆಗಾಲದಲ್ಲಿ ಮಳೆಗಾಳಿಗೆ ಮೈಯೊಡ್ಡಿ ಅವಳೆಸಗಿದ ತಪಕ್ಕೆ ಮಿಂಚುನೋಟದ ಇರುಳುಗಳೆ ಸಾಕ್ಷಿಗಳು; ಚಳಿಗಾಲದಲ್ಲಿ ನೀರಿನ ನಡುವೆ ನಿಂತು ತಪಸ್ಸು (೧೯–೨೭); ತಪಸ್ವಿಗಳ ಆಹಾರವಾದ ಉದುರಿದ ಪರ್ಣ (ಎಲೆ)ಗಳನ್ನೂ ಮುಟ್ಟದೆ 'ಅಪರ್ಣೆ' ಎನಿಸಿದಳು (೨೮); ಇಂತ ಕಠಿನ ವ್ರತಗಳಿಂದ ಋಷಿಗಳ ತಪಸ್ಸನ್ನೂ ಮೀರಿಸಿದಳು (೨೯).

ಹೀಗಿರಲು, ಬ್ರಹ್ಮತೇಜಸ್ಸಿನಿಂದ ಬೆಳಗುವ ಜಟಾಧಾರಿಯಾದ ಬ್ರಹ್ಮಚಾರಿಯೊಬ್ಬನು ತಪೋವನವನ್ನು ಪ್ರವೇಶಿಸಿದನು (೩೦); ಪಾರ್ವತಿ ಇದಿರೆದ್ದು ಆತನನ್ನು ಸತ್ಕರಿಸಲು, ಆತನು ಅವಳೊಡನೆ ಇಂತು ನುಡಿದನು (೩೦–೩೨):—

"ತಪಸ್ಸಿಗೆ ಎಲ್ಲ ಸೌಕರ್ಯಗಳೂ ಇವೆಯೆ? ನೀನು ಬೆಳೆಸಿದ ಬಳ್ಳಿಗಳ ಕೆಂಪು ಚಿಗುರು ಚೆನ್ನಾಗಿ ಬೆಳೆಯುತ್ತಿರುವವೆ? ನಿನ್ನೊಂದಿಗೆ ಸಲಿಗೆ ಬೆಳೆಸಿರುವ ಜಿಂಕೆಗಳ ಬಗೆಗೆ ನಿನ್ನ ಮನಸ್ಸು ಸುಪ್ರಸನ್ನವಾಗಿರುವುದಷ್ಟೆ? ರೂಪವಿದ್ದೆಡೆ ಪಾಪವಿರದೆಂಬುದಕ್ಕೆ ನೀನೇ ನಿದರ್ಶನ (೩೩–೩೬); ಹಿಮವಂತನು ನಿನ್ನ ನಡೆವಳಿಯಿಂದ ಶುದ್ಧನು, ಗಂಗೆಯಿಂದಲ್ಲ (೩೭); ಧರ್ಮ ಅರ್ಥ ಕಾಮಗಳಲ್ಲಿ—ನೀನು

ಧರ್ಮವನ್ನು ಸೇವಿಸಿದೆಯಾದ್ದರಿಂದ ಅದು ಶ್ರೇಷ್ಠ (೩೮); ನಿನ್ನಿಂದ ಸತ್ಕೃತನಾದ ನಾನು ಹೊರಗಿನವನೆಂದು ಭಾವಿಸಬೇಡ ; ಬ್ರಾಹ್ಮಣ ಸಹಜವಾದ ಚಾಪಲ್ಯದಿಂದ ನಾನು ಕೇಳುವ ಪ್ರಶ್ನೆಗೆ, ಗೋಪ್ಯವಲ್ಲದ ಪಕ್ಷಕ್ಕೆ, ಉತ್ತರ ಕೊಡು (೩೯–೪೦); ಸತ್ಕುಲ, ಯೌವನ, ಸೌಂದರ್ಯ – ಎಲ್ಲ ಇರಲಾಗಿ, ಯಾವ ಫಲಕ್ಕಾಗಿ ತಪಸ್ಸು ? ಕೆಲವು ಮಾನಿನಿಯರಂತೆ, ಕ್ಲೇಶನಿವಾರಣೆ ನಿನ್ನ ತಪದ ಉದ್ದೇಶವಾಗಿರಲಾರದು ; ಶೋಕದ ಹೊಡೆತವಾಗಲಿ, ತಂದೆಯ ಮನೆಯಲ್ಲಿ ಅಥವಾ ಹೊರಗೆ ಅಪಚಾರವಾಗಲಿ ನಿನಗೆ ಸಂಭವಿಸಲಾರದು ; ಯೌವನಕ್ಕೆ ತಕ್ಕ ಒಡವೆಗಳನ್ನು ಬಿಟ್ಟು ಮುಪ್ಪಿನ ನಾರುಡೆಯೇಕೆ? ಸ್ವರ್ಗಪ್ರಾಪ್ತಿ ,ನಿನ್ನ ಬಯಕೆಯೆ? ನಿನ್ನ ತಂದೆಯದೇ ದೇವಭೂಮಿ. ವರನ ಅಪೇಕ್ಷೆಯೇ? ( ಕನ್ಯಾ ) ರತ್ನದ ಬಳಿಗೆ ಬರಬೇಕೇ ಹೊರತು, ರತ್ನವೇ ಹುಡುಕಹೊರಡದಷ್ಟೆ? ನಿನ್ನ ಬಿಸಿಯುಸಿರಿನಿಂದ, ನನ್ನ ಊಹೆ ಸರಿಯೆಂದು ಕಾಣುವುದು ; ನೀನು ಪ್ರಾರ್ಥಿಸಬಯಸುವಂಥವನು ಇದ್ದರೂ, ನಿನಗೆ ದುರ್ಲಭನಲ್ಲ (೪೦–೪೬); ನಿನ್ನನ್ನು ಉಪೇಕ್ಷಿಸಿರುವ ಆ ಯುವಕನು ಪ್ರತಿಷ್ಠೆಯುಳ್ಳವನಾಗಿರಬೇಕು, ತಪದಿಂದ ಕೃಶಳಾದ ನಿನ್ನನ್ನು ಕಂಡು ಯಾರು ತಾನೆ ಮರುಗರು ? ನಿನ್ನ ಸುಂದರ ನಯನಗಳಿಗೆ ಮುಖ ತೋರದಿರುವ ಆ ನಿನ್ನ ಪ್ರಿಯನು ತನ್ನ ಸೌಭಾಗ್ಯ ಮದದಿಂದ ಮೋಸಹೋಗಿರುವನು ; ನಾನು ಗಳಿಸಿರುವ ತಪಃಫಲದ ಅರ್ಧವನ್ನು ತೆಗೆದುಕೋ ; ತಪಸ್ಸನ್ನು ನಿಲ್ಲಿಸಿ ಬಯಸಿದ ವರನನ್ನು ಪಡೆ." (೪೭–೫೦).

ವಿಪ್ರನ ಮರ್ಮಭೇದಕವಾದ ಈ ನುಡಿಗಳನ್ನು ಕೇಳಿ ಗಿರಿಜೆ ಉತ್ತರ ಕೊಡಲಾರದೆ, ಸಖಿಯ ಕಡೆ ತಿರುಗಿ ನೋಡಿದಳು (೫೧). ಸಖಿ ಹೀಗೆ ಹೇಳಿದಳು :

"ಬಿಸಿಲಿಗೆ ತಾವರೆಮರೆಯೆಂತೋ ಅಂತೆ ತಪಕ್ಕೆ ಅವಳ ಶರೀರ ಸಾಧನ ; ಮದನ ಹರನಾದ ಪಿನಾಕಪಾಣಿಯನ್ನು ಪಡೆಯುವುದೇ ಅವಳ ಇಚ್ಛೆ (೫೨–೫೩); ಮದನನ ಬಾಣ ಅಂದು ಗುರಿತಪ್ಪಿ ಹಿಂತಿರುಗಿದ್ದು ಪಾರ್ವತಿಯ ಹೃದಯಕ್ಕೆ ನಾಟಿದೆ (೫೪); ಅಂದಿನಿಂದ, ಪ್ರೇಮೋನ್ಮಾದೆಯಾದ ಅವಳು ಹಿಮಶಿಲೆಯ ಮೇಲೆ ಮಲಗಿಯೂ ಕಾಮಜ್ವರದ ನಿವಾರಣೆ ಹೊಂದಿಲ್ಲ; ಪಿನಾಕಿಯ ಚರಿತ್ರೆಯನ್ನು ಹಾಡುತ್ತ ಗದ್ಗದಿತೆಯಾಗಿ ಮಾತು ಮರೆತಿದ್ದಾಳೆ (೫೫–೫೬); ರಾತ್ರಿಯ ಕಡೆಯಭಾಗದಲ್ಲಿ ನೀಲಕಂಠನನ್ನು ನೆನೆದು, ಎಚ್ಚರಗೊಂಡು, ಕಾಣದ ಕೊರಳನ್ನು ಅಪ್ಪಿದ್ದಾಳೆ (೫೭); ತಾನೇ ಬರೆದ ಚಂದ್ರಶೇಖರನ ಚಿತ್ರವನ್ನು ಹಿಡಿದು, 'ಸರ್ವ

ವ್ಯಾಪಕನಾದ ನೀನು ನನ್ನನ್ನೇಕೆ ಕಾಣದಿರುವೆ' ಎಂದು ನಿಂದಿಸಿರುವಳು (೫೮); ಆ ಜಗತ್ಪತಿಯನ್ನು ಪಡೆಯಲು ಬೇರೆಯ ಉಪಾಯ ಕಾಣದೆ, ತಪಸ್ಸಿಗಾಗಿ ಈ ವನಕ್ಕೆ ಬಂದಳು (೫೯); ಅವಳು ನಟ್ಟ ಗಿಡ ಫಲ ಬಿಟ್ಟಿದ್ದರೂ, ಪ್ರೇಮದ ಮೊಳಕೆ ಕೂಡ ಆಗಿಲ್ಲ (೬೦); ತಪಸ್ಸಿನಿಂದ ಕೃಶೆಯಾದ ನಮ್ಮ ಸಖಿಯನ್ನು ಶಿವನು ಎಂದು ಅನುಗ್ರಹಿಸುವನೋ ಕಾಣೆವು" (೬೧).

ಈ ನುಡಿಗಳನ್ನು ಕೇಳಿದ ಬ್ರಹ್ಮಚಾರಿಯು, 'ಇದು ನಿಜವೋ ಪರಿಹಾಸವೋ?' ಎಂದು ಉಮೆಯನ್ನೇ ಕೇಳಿದನು (೬೨); ಪಾರ್ವತಿ ಸಂಕ್ಷೇಪವಾಗಿ ಹೀಗೆ ಹೇಳಿದಳು: "ನೀನು ಕೇಳಿದ್ದು ದಿಟ. ತನ್ನ ಬಯಕೆಯ ಉಚ್ಚಪದ ಪ್ರಾಪ್ತಿಗಾಗಿ ಈಕೆಯ (ನನ್ನ) ಈ ತಪಸ್ಸು" (೬೩-೬೪).

ಅದಕ್ಕೆ ಬ್ರಹ್ಮಚಾರಿಯು ಇಂತು ನುಡಿದನು :

"ಅಮಂಗಳದಲ್ಲಿಯೇ ಆಸಕ್ತನಾದ ಮಹೇಶ್ವರನನ್ನು ನೀನು ಬಯಸುವುದು ನನಗೆ ಒಪ್ಪಿತವಾಗಿಲ್ಲ. ವಿವಾಹ ಕಂಕಣ ಕಟ್ಟಿದ ನಿನ್ನ ಕೈ, ಹಾವಿನ ಬಳೆ ತೊಟ್ಟ ಅವನ ಕೈಯನ್ನು ಹೇಗೆ ತಾನೇ ಹಿಡಿದೀತು? ವಧುವೆನಿಸುವ ನಿನ್ನ ರೇಷ್ಮೆಯ ವಸ್ತ್ರಕ್ಕೂ ವರನಾಗುವ ಅವನ ಆನೆಯ ಚರ್ಮಕ್ಕೂ ಸರಿಜೋಡಿಯೆ? ಮದುವೆಯ ಮಂಟಪದ ಹೂ ಹಸರವನ್ನು ನಡೆದ ನಿನ್ನ ಮೃದುಪಾದ ಆ ಒಡನೆಯೆ ಕೂದಲ ರಾಶಿ ತುಂಬಿದ ಶ್ಮಶಾನವನ್ನು ತುಳಿಯುವುದು ತರವೆ? ಗಜರಾಜನ ಮೇಲೆ ಮೆರೆಯುವುದನ್ನು ಬಿಟ್ಟು ಮುದಿಯೆತ್ತಿನ ಮೇಲೆ ಕುಳಿತು ಹೊರಟರೆ ಜನರ ನಗೆಗೆ ಗುರಿಯಾಗುವೆಯಲ್ಲವೆ? ಇಳೆಯ ಕಣ್ಣ ಬೆಳುದಿಂಗಳಾದ ನೀನು ಪಿನಾಕಿಯನ್ನು ಬಯಸುವುದು ಶೋಚನೀಯ. ನೀನು ಬಯಸುವ ಅವನಲ್ಲಿ ಇರುವುದಾದರೂ ಏನು? ಕುಲವೆ, ರೂಪೆ, ಉಡುಗೆತೊಡಿಗೆಯೆ, ಸಿರಿಯೆ? ಒಂದೂ ಇಲ್ಲ. ಸರ್ವಥಾ ಯೋಗ್ಯನಲ್ಲದ ಅವನತ್ತಣಿಂದ ನಿನ್ನ ಮನಸ್ಸನ್ನು ಹಿಂತಿರುಗಿಸು." (೬೫-೭೦).

ಬ್ರಹ್ಮಚಾರಿಯ ಪ್ರತಿಕೂಲ ವಚನವನ್ನು ಕೇಳಿ ಕೋಪಗೊಂಡ ಪಾರ್ವತಿ ಹೀಗೆ ನುಡಿದಳು (೭೪) :—

"ಹರನನ್ನು ನೀನರಿಯೆ, ಆದ್ದರಿಂದ ಹೀಗೆ ನುಡಿವೆ. ಮಂಗಳವನ್ನು ಆಶ್ರಯಿಸುವವರು ಸಾಮಾನ್ಯ ಜನ. ಶಿವನಿಗೆ ಅದರ ಅಗತ್ಯವಿಲ್ಲ. ಹಣವಿಲ್ಲದಿದ್ದರೂ ಅವನು ಸಂಪತ್ಪ್ರದ; ಶ್ಮಶಾನವಾಸಿಯಾದರೂ ಮೂರು ಲೋಕಕ್ಕೆ ಒಡೆಯನು; ಭಯಂಕರನಾಗಿಯೂ ಶಂಕರ. ಅವನನ್ನು ಬಲ್ಲವನಿಲ್ಲ (೭೫-೭೭); ವಿಶ್ವಮೂರ್ತಿಯಾದ ಅವನ ಶರೀರಾಕೃತಿಯನ್ನು ನಿರ್ಣಯಿಸುವುದು ಕಷ್ಟ; ಅವನ ದೇಹದ

ಸೋಂಕು ಪಡೆದದ್ದರಿಂದ ಚಿತೆಯ ಬೂದಿಯೂ ಪವಿತ್ರ (೭೮-೭೦); ದಿಗ್ಗಜವನ್ನು ಏರಿರುವ ಇಂದ್ರನೇ ಎತ್ತನ್ನು ಏರಿರುವ ಅವನಿಗೆ ಅಡಿಮುಟ್ಟಿ ಎರಗುವನು (೮೦); ಅವನ ದೂಷಣೆಯಲ್ಲಿಯೂ ನೀನು ಆಡಿರುವುದು ಒಂದು ನಿಜವೆ: ಆತ್ಮಭೂ ಎನಿಸಿದ ಬ್ರಹ್ಮನಿಗೂ ಮೂಲಕಾರಣನಾದ ಅವನು ನಿಜವಾಗಿ ಅಜ್ಞಾತಕುಲನೇ ಸರಿ (೮೧); ಅವನು ನೀನು ಹೇಳುವಂತೆಯೇ ಇರಲಿ, ಈ ಬಗೆಗೆ ವಾಗ್ವಾದ ಬೇಡ; ನನ್ನ ಮನಸ್ಸಂತೂ ಅವನಲ್ಲಿ ನಟ್ಟಿದೆ." (೮೨).

ಗಿರಿಜೆ ಇಷ್ಟು ಹೇಳಿ, ಇನ್ನೂ ಏನೋ ನುಡಿಯಲ್ಲಿದ್ದ ಆ ವಟು ಬಾಯಿ ಬಿಡದ ಹಾಗೆ ತಡೆಯುವಂತೆ ಸಖಿಗೆ ಹೇಳುವಳು (೮೩); ಇಲ್ಲದಿದ್ದರೆ ತಾನೇ ಆ ಎಡೆಯುಳಿದು ಹೊರಟುಹೋಗುವೆನೆಂದು ಹೊರಡಲು, ಈಶ್ವರನು ತನ್ನ ನಿಜ ರೂಪನ್ನು ಧರಿಸಿ, ನಸುನಗುತ್ತ ಅವಳ ಕೈಹಿಡಿಯುವನು. ಆಗ, ಅವನನ್ನು ಕಂಡ ಗಿರಿತನಯೆ ನಡುಗುತ್ತ ಸ್ತಬ್ಧಳಾಗಿ ನಿಂತೆಡೆ ನಿಲ್ಲುವಳು. (೮೩-೮೫).

ಆಗ, "ನಿನ್ನ ತಪಸ್ಸು ಕೊಂಡುಕೊಂಡ ನಾನು ಇಂದಿನಿಂದ ನಿನ್ನ ದಾಸ" ಎನ್ನುವನು ಚಂದ್ರಮೌಳಿ.

ಇಲ್ಲಿಗೆ, ಗಿರಿಜೆಯ ತಪಸ್ಸಿನ ಆಯಾಸವೆಲ್ಲ ಕಳೆಯಿತು. ಪಟ್ಟ ಪ್ರಯತ್ನಕ್ಕೆ ಫಲ ದೊರೆತರೆ ಹೊಸ ಹುಮ್ಮಸ್ಸು ಹೊಮ್ಮುವುದು. (೮೬).

## ೨

## ಸನ್ನಿವೇಶಗಳ ಸಮಾಲೋಚನೆ

ಇದುವರೆಗೆ ಕಾವ್ಯ ಕಥಾವಿಷಯದ (ವಸ್ತುವಿನ) ಹಂದರವನ್ನು ನಿರೀಕ್ಷಿಸಿ ದ್ದಾಯಿತು; ಕಾವ್ಯದ ಸೌಂದರ್ಯ ಹೊರ ಹೊಮ್ಮಿರುವುದು, ಅದನ್ನು ಆಶ್ರಯಿಸಿ ಹಬ್ಬಿರುವ ಚೆಲುವಾದ ಕಾವ್ಯಲತೆಯಲ್ಲಿ; ಅದು ಬಿಟ್ಟಿರುವ ಚೆಂದಳಿರು, ನನೆಕೊನೆ, ಬಣ್ಣ ಬಣ್ಣದ ಹೂವೊಗ್ಗುಗಳಲ್ಲಿ; ಇವುಗಳ ಪರಿಣಾಮರಮಣೀಯತೆಯಲ್ಲಿ, ಇವು ಸೂಸುವ ಸೌರಭದಲ್ಲಿ.

ಕಾವ್ಯದಲ್ಲಿ ಕಥೆಯ ಅಂಶ ಪ್ರಧಾನವಾಗಿ ಇತರ ಸೌಂದರ್ಯಾಂಶಗಳು (ಎಂದರೆ ವರ್ಣನೆ, ಭಾವವಿಲಾಸ ಸಾಧಕಗಳಾದ ಉಪಮೆ ಮೊದಲಾದ ಅಲಂಕಾರ ಗಳು, ಪಾತ್ರ ಸೃಷ್ಟಿ, ಜೀವನ ದರ್ಶನ-ಸ್ಫುರಣ) ಹಿಂದಕ್ಕೆ ಸರಿದರೆ, ಹೂಬಳ್ಳಿ-ಅಥವಾ ಹೂವೇ ಇಲ್ಲದ ಬಳ್ಳಿ-ಎಲ್ಲೆಡೆಯೂ ತುಂಬಿ ಹಬ್ಬಿರದ ಬೋಳ ಹಂದರ ದಂತೆ ಕಾಣುತ್ತದೆ ಕಾವ್ಯ. ಬಳ್ಳಿಯ ಹಬ್ಬುಗೆಗೆ ಹಂದರವೇ ಹೊರತು, ಹಂದರ ವನ್ನು ಮೆರಸುವುದಕ್ಕಲ್ಲ ಬಳ್ಳಿ. ಕಾಳಿದಾಸನು ಈ ಔಚಿತ್ಯವನ್ನು ಬಲ್ಲ ಕವಿ.

ಅವನ ಬಹುಮುಖ ಪ್ರತಿಭೆಯ ವಿಸ್ತಾರವಾದ ವೈವಿಧ್ಯಪೂರ್ಣವಾದ ಹರಹಿ
ಕಥೆ ಎನ್ನುವುದು ಕೇವಲ ಒಂದು ವ್ಯಾಜ, ನೆಪ; ಚಿನ್ನದ ಪ್ರತಿಮೆಗೆ ಚಿಕ್ಕ ಪೀಠಿ
ಇದ್ದಂತೆ. ಕಾವ್ಯದ ಕಥಾವಿಷಯವನ್ನು ಹೆಚ್ಚೆಂದರೆ ಒಂದೆರಡು ಪುಟಗಳಲ್ಲಿ
ನಿರೂಪಿಸಬಹುದು.

ಕಾಳಿದಾಸನು ಕವಿಮಾತ್ರವಲ್ಲದೆ ನಾಟಕಕಾರನೂ ಆಗಿದ್ದನೆಂಬುದನ್ನು
ನಾವು ಈ ಸಂದರ್ಭದಲ್ಲಿ ನೆನೆಯುವುದು ಅಗತ್ಯ. ಅವನ ಪರಮೋತ್ಕೃಷ್ಟ
ಕೃತಿಯಾದ 'ಶಾಕುಂತಲ' ನಾಟಕಕ್ಕೆ ಕವಿತೆಯ ಅಮೃತ ಸೇಚನವೂ ಇರುವಂತೆ
'ಕುಮಾರ ಸಂಭವ'ದ ಉದ್ದಕ್ಕೂ ಅಲ್ಲಲ್ಲಿ ನಾಟಕೀಯ ಸ್ವಾರಸ್ಯವನ್ನೂ ನಾವು
ಕಾಣಬಹುದು. ಬ್ರಹ್ಮನ ಬಳಿ ದೇವತೆಗಳು ಹೋಗಿ ಮೊರೆಯಿಡುವ ಸನ್ನಿವೇಶ
ಈಶ್ವರನ ತಪೋಭಂಗ ಕಾರ್ಯಕ್ಕೆ ಇಂದ್ರನು ಮನ್ಮಥನನ್ನು ನಿಯೋಜಿಸು
ಸಂದರ್ಭ, ರತಿವಿಲಾಪ ಪ್ರಕರಣ, ಗಿರಿಜೆ ಮತ್ತು ವಟುವೇಷದ ಶಿವನ ಸಂವಾದ
ಸನ್ನಿವೇಶ–ಇವುಗಳಲ್ಲಿ ಸನ್ನಿವೇಶ ನಿರ್ವಹಣದ ಸೊಗಸು, ಪಾತ್ರಸೃಷ್ಟಿ, ಸ್ವಾರಸ್ಯ
ವಾದ ಸಂಭಾಷಣೆ, ರಸಪ್ರತೀತಿ ಇವೇ ಮೊದಲಾದ ನಾಟಕೀಯ ಅಂಶಗಳ
ಮಧುರ ಸಂಮಿಶ್ರಣದ ಮೆರುಗನ್ನು ಕಾಣಬಹುದು. ಪ್ರತಿಯೊಂದು ಸನ್ನಿವೇಶ
ದಲ್ಲಿಯೂ ಈ ಎಲ್ಲ ಅಂಶಗಳೂ ಸಮಪ್ರಮಾಣದಲ್ಲಿ ಇವೆ ಎಂದಲ್ಲ
ಇರಬೇಕಾಗಿಯೂ ಇಲ್ಲ. ನಾಟಕದಲ್ಲಿ ಕೂಡ ಒಂದು ದೃಶ್ಯದಲ್ಲಿ ಸನ್ನಿವೇಶ
ರಚನಾಕೌಶಲ ಕಂಡುಬಂದರೆ, ಇನ್ನೊಂದು ಸ್ವಾರಸ್ಯವಾದ ಸಂವಾದದಿಂದ
ಕೂಡಿರುತ್ತದೆ; ಮತ್ತೊಂದರಲ್ಲಿ ಪಾತ್ರಪೋಷಣೆ ಮೇಲುಗೈಯಾಗಿರುತ್ತದೆ. ಈ
ಹಿನ್ನೆಲೆಯಲ್ಲಿ, ಮೇಲೆ ಹೇಳಿದ ಸನ್ನಿವೇಶಗಳ ಸಮಾಲೋಚನೆ ಮಾಡಬಹುದು

## ತಾರಕನ 'ತೋಟಿ'

ಮೊದಲನೆಯ ಸರ್ಗದಲ್ಲಿ ಕವಿ ಹಿಮಾಲಯ ಪರ್ವತ, ಕಾವ್ಯನಾಯಕಿ
ಯಾದ ಗಿರಿಜೆಯ ಜನನ ಬಾಲ್ಯ ಇವುಗಳ ಸುಂದರ ಚಿತ್ರವೊಂದನ್ನು ನಮ್ಮ
ಮುಂದಿಟ್ಟು, ಎರಡನೆಯ ಸರ್ಗದಲ್ಲಿ ಕುಮಾರ ಜನನಕ್ಕೆ ಕಾರಣಭೂತನಾದ
ತಾರಕನ ಕೋಟಲೆಯ ವರ್ಣನೆಗೆ ತೊಡಗುತ್ತಾನೆ. ತಾರಕನಿಗೆ ಬ್ರಹ್ಮನು
ವರವನ್ನು ಕೊಟ್ಟ ಸಂದರ್ಭ, ಆ ಅಸುರನ ಪೂರ್ವವೃತ್ತಾಂತ ಮೊದಲಾದ
ಅನಾವಶ್ಯಕ ಸಂಗತಿಗಳ ನಿರೂಪಣೆಗೆ ತೊಡಗದಿರುವುದು ಕವಿಯ ಔಚಿತ್ಯ
ಜ್ಞಾನವನ್ನು ತೋರಿಸುತ್ತದೆ. "ಆ ಕಾಲದೊಳ್ ತಾರಕಾಸುರನ ತೋಟಿಗೆ
ದಿವೌಕಸರ್ ನೊಂದು ಸ್ವಾಯಂಭು ಧಾಮದೆಡೆಗೈತಂದರ್" ಎಂದು ನೇರವಾಗಿ

ಹೊಸ ಕಥಾ ಸಂವರ್ಧಕ್ಕೆ ದುಮ್ಮಿಕ್ಕಿರುವುದು ಕಾಳಿದಾಸನ ಕಥನ ಕೌಶಲಕ್ಕೆ ಕುರುಹು.

ದೇವತೆಗಳು ತಮ್ಮ ಒಡೆಯನಾದ ಇಂದ್ರನನ್ನು ಮುಂದಿಟ್ಟುಕೊಂಡು ಬ್ರಹ್ಮನ ಸಮ್ಮುಖದಲ್ಲಿ ನಿಂತು, ಆ ವಿರಿಂಚಿಯ ದರ್ಶನ ಪಡೆದರು. ಬ್ರಹ್ಮನನ್ನು ಕಂಡೇ ಅವರ ಮುಖ ಅರಳಿತು; ಉದಯ ರವಿಯೆದುರು ತಾವರೆ ಅರಳುವಂತೆ; ಅವರು"ಸಾರ್ಥವಚನಂಗಳಿಂದೊಲಿದು ಕೊಂಡಾಡಿದರ್ ಬಳಿಕ ವಾಕ್‌ಪತಿಯನ್." ಬ್ರಹ್ಮನ ಸ್ತೋತ್ರದಲ್ಲಿ ಕಾಳಿದಾಸನು ತನ್ನ ದಾರ್ಶನಿಕ ತತ್ತ್ವಗಳನ್ನು ಸಂಕ್ಷೇಪವಾಗಿ ನಿರೂಪಿಸಿದ್ದಾನೆ. ಯಾರ ವರಬಲದಿಂದ ತಾರಕನು ಅಜೇಯನಾಗಿರುವನೋ, ಮತ್ತೆ ಅವನ ಸಂಹಾರಕ್ಕೆ ಅದಾರಿಂದ ಮಾರ್ಗದರ್ಶನ ದೊರೆಯಬೇಕಾಗಿದೆಯೋ ಆ ಮಹಾ 'ವಿಲಯ ಪಾಲನ ಸರ್ಗ ಕಾರ್ಯಕಾರಣ'ನನ್ನು ಕುರಿತ ದೇವತೆಗಳ 'ಯಥಾರ್ಥ ಮನೋಜ್ಞ ಸಂಸ್ತುತಿ' ಸನ್ನಿವೇಶದ ಗಂಭೀರತೆಗೆ ಪೋಷಕವಾಗಿದೆ.

ಸರ್ಗದ ಮುಂದಿನ ಭಾಗವೆಲ್ಲ ತಾರಕಾಸುರನ ಉಪಟಳದ ಚಿತ್ರಣಕ್ಕೆ ಮೀಸಲು. ಇದರಲ್ಲಿ ಎರಡು ಭಾಗಗಳಿವೆ; ದೇವತೆಗಳ ದೈನ್ಯಾವಸ್ಥೆಗೆ ಕಾರಣ ಏನೆಂದು ಕೇಳುವ ಬ್ರಹ್ಮನ ಪ್ರಶ್ನಾವಳಿಯ ಭಾಗ; ತಾರಕನ ಕೋಟಲೆಯನ್ನು ವಿವರಿಸಿ, ತಮ್ಮ ದುರವಸ್ಥೆಯ ಚಿತ್ರವನ್ನು ತಮ್ಮ ಪಿತಾಮಹನ ಮುಂದಿಡುವ ದೇವತೆಗಳ ಉತ್ತರದ ಭಾಗ. ಮೊದಲನೆಯದರಲ್ಲಿ, ಬ್ರಹ್ಮನು ತಾನೇ ಕಂಡ ದೇವತೆಗಳ ಭಗ್ನ ಪರಾಕ್ರಮ ಚಿಹ್ನಗಳ ವರ್ಣನೆಯಲ್ಲಿ ತಾರಕನ ವಿನಾಶಕ ಪ್ರಭಾವದ ಪರೋಕ್ಷ ಚಿತ್ರಣವಿದೆ; ಎರಡನೆಯದರಲ್ಲಿ, ತಾರಕನ ಕೋಟಲೆಯ ಪ್ರತ್ಯಕ್ಷ ದರ್ಶನ ಮಾಡಿಸುವ ಮಾರ್ಮಿಕವಾದ ಕಥನವಿದೆ.

ಒಬ್ಬೊಬ್ಬ ದೇವತೆಯ ದೀನಚಿತ್ರವನ್ನೂ ನಮ್ಮ ಮುಂದಿಡುವಾಗಲೂ ಕವಿಯು ಬ್ರಹ್ಮನ ಉಕ್ತಿಗಳಲ್ಲಿ ಕೋದಿರುವ ಉಪಮಾನಗಳ ಮಾಲೆ, ದೇವತೆಗಳ ಶೋಚನೀಯ ಸ್ಥಿತಿಯನ್ನು ಕಣ್ಣಿಗೆ ಕಟ್ಟುವಂತೆ, ಮನಸ್ಸಿಗೆ ಮುಟ್ಟುವಂತೆ, ಮೂರ್ತೀಕರಿಸಿದೆ. ದೇವತೆಗಳ ಸ್ಥಿತಿಯನ್ನು ಕಂಡು ಯಾರಿಗಾದರೂ 'ಅಯ್ಯೋ ಪಾಪ!' ಎನ್ನಿಸದಿರದು. "ಹಿಮದಿಂದ ಕಾಂತಿ ನಸುಮಂಕಾದ ಹೊಂದಾರೆ" ಯಂತೆ ದೇವತೆಗಳ ಮುಖ ಬಾಡಿದೆ. ಮಬ್ಬಾದ ಮಳೆಬಿಲ್ಲಿನಂತೆ ಮೊನೆಮುರಿದ ಇಂದ್ರನ ವಜ್ರಾಯುಧ; ಮಂತ್ರದಿಂದ ಹತವೀರ್ಯವಾದ ಹಾವಿನಂತಹ, ವರುಣನ ಕೈಯ ಪಾಶ; ಕೊಂಬೆ ಮುರಿದ ಮರದಂತೆ ಕಾಣುತ್ತ, ಗದೆಯಿಳುಹಿದ ಕುಬೇರನ ತೋಳು-ಹೀಗೆಯೇ ಸಾಗುತ್ತದೆ, ದೈನ್ಯವೇ ಮೂರ್ತಿವೆತ್ತಂತಿರುವ ದಿಕ್ಪಾಲಕರ

ದಾರುಣ ಚಿತ್ರಮಾಲೆ. ರಂಗಭೂಮಿಯ ಮೇಲೆ, ಬ್ರಹ್ಮನ ಸಮ್ಮುಖದಲ್ಲಿ ಅಲಂಕಾರಕ್ಕಾಗಿ ಆಯುಧ ಹಿಡಿದು ತಲೆತಗ್ಗಿಸಿ ನಿಂತಿರುವ ದೇವತೆಗಳ ಸಾಲ ನಮ್ಮ ಬಗೆಗಣ್ಣ ಮುಂದೆ ನಿಲ್ಲುತ್ತದೆ.

ಬ್ರಹ್ಮನ ಪ್ರಶ್ನೆಗಳಿಗೆ, ದೇವತೆಗಳ ನಿಯೋಗದ ನಾಯಕನಾದ ಇಂದ್ರನ ಉತ್ತರಿಸಬೇಕು. ಆದರೆ, ಲಜ್ಜೆಯಿಂದ ಅವನ ನಾಲಗೆ ಕಟ್ಟಿಹೋಗಿದೆ. ತಮ ಆಡಸಿರುವ ವಿಪತ್ತನ್ನು ತಮ್ಮ ಪರವಾಗಿ ನಿವೇದಿಸಿಕೊಳ್ಳುವಂತೆ ಇಂದ್ರನ ಗುರುವನ್ನು ಸಾವಿರ ಕಣ್ಣ ಸನ್ನೆಯ ಮೂಲಕ ಪ್ರೇರಿಸುತ್ತಾನೆ.

ಗುರುವಚನದಲ್ಲಿ ಲೋಕಕಂಟಕನಾದ ತಾರಕನ ಹಿಂಸಾಕಾರ್ಯಗಳ ವಿವರ ಪೂರ್ಣವಾದ ಒಕ್ಕಣೆಯಿದೆ:

ಬ್ರಹ್ಮನ ವರಬಲದಿಂದ ಕೊಬ್ಬಿದ್ದಾನೆ ಆ ತಾರಕ. ಧೂಮಕೇತುವಿನಂತೆ ಅವನು ವಿಪತ್ ಸೂಚಕ. ಆ ಖಳ ಮಹಾಸುರನಿಗೆ ಹೆದರಿ, ಸೂರ್ಯನು ಅವನ ಪುರದಲ್ಲಿ ಎಲ್ಲೋ ತುಸ ಬಿಸಿಲನ್ನು ಸೂಸುತ್ತಾನೆ; ಚಂದ್ರನಾದರೋ ಕಲಾ ಪೂರ್ಣನಾಗಿ ಬೆಳಗುತ್ತ ಅವನನ್ನು ಸೇವಿಸುತ್ತಾನೆ; ತಾರಕನ ಉದ್ಯಾನದಲ್ಲಿ ಮಾರುತ ಬೀಸುವುದು ಬಹುಮೆಲ್ಲನೆ, ಬೀಸಣಿಗೆಯ ಗಾಳಿಯಷ್ಟು ಮಾತ್ರ —ಎಲ್ಲಿ ಕುಸುಮದ ಕಂಪಿನ ಕಳವು ತನ್ನಿಂದ ಆಗುವುದೋ ಎಂಬ ಭೀತಿಯಿಂದ; ಎಲ್ಲ ಋತುಗಳೂ 'ಪರ್‍ಯಾಯ ಸೇವೆಯಂ ತ್ಯಜಿಸಿ' ಏಕಕಾಲದಲ್ಲಿ ಅವನ ಉದ್ಯಾನವನ್ನು ಓಲೈಸುತ್ತಿವೆ; ತಾರಕನಿಗೆ ಯೋಗ್ಯರತ್ನಗಳನ್ನು ಕಾಣಿಕೆ ಯೊಪ್ಪಿಸಲು ಸರಿತ್‌ಪತಿ (ಸಮುದ್ರನು) ಕುತೂಹಲಿಯಾಗಿದ್ದಾನೆ; ವಾಸುಕಿಯೇ ಮೊದಲಾದ ಸರ್ಪಗಳು ತಮ್ಮ ಫಣಾಮಣಿಗಳ ರತ್ನದೀಪಗಳಿಂದ ಇರುಳಿನಲ್ಲಿ ಅವನನ್ನು ಸೇವಿಸುವವು; ತಾರಕಾನುಗ್ರಹ ಸಂಪಾದನೆಗಾಗಿ ಇಂದ್ರನೇ ಕಲ್ಪ ವೃಕ್ಷದ ಒಡವೆಗಳನ್ನು ಅವನಿಗೆ ಆಗಾಗ್ಗೆ ಒಪ್ಪಿಸುತ್ತಿರುವನು. (ಗುರು ಈ ಮಾತನ್ನು ಹೇಳುತ್ತಿರುವಾಗ ಬಳಿಯೆ ಇದ್ದ ಇಂದ್ರನ ತಗ್ಗಿದ ತಲೆ ಇನ್ನೂ ತಗ್ಗಿರಬೇಕು!) ದೇವತೆಗಳಿಂದ ಹೀಗೆ ಸಂಪೂಜಿತನಾದರೂ ಅವನಿಗೆ ತೃಪ್ತಿಯಿಲ್ಲ; ಮೂರು ಲೋಕಗಳನ್ನೂ ಹಿಂಸಿಸುತ್ತಿರುವನು. ದೇವತಾ ಸ್ತ್ರೀಯರು ಮುಟ್ಟಿದರೆ ನೋಯುವುವೆಂದು ಹೂಗೊಯ್ಯುವ ನಂದನ ವೃಕ್ಷಗಳನ್ನು ಅವನು ಕೆಡವುತ್ತಾನೆ, ಕಡಿಯುತ್ತಾನೆ, ಎಂದ ಮೇಲೆ ಅವನೆನ್ನೆಂತಹ ನೃಶಂಸ! 'ಸೆರೆ ಹೊಂದಿದ ಸುರ ಸ್ತ್ರೀಯರು ಅವನ ಸೇವೆಯಲ್ಲಿ ಕೊರಗುತ್ತಿದ್ದಾರೆ, ಕೃಶರಾಗುತ್ತಿದ್ದಾರೆ. ಉತ್ತುಂಗ ಮೇರುಶೃಂಗ ಅವನ ಅರಮನೆಯ ಬಳಿಯ ಕ್ರೀಡಾ ಶೈಲವಾಗಿದೆ.

ಗಂಗೆಯ ಹೊಂದಾವರೆ ಇಂದು ಅಸುರನ ನಿವಾಸದ ಬಾವಿಯನ್ನಲಂಕರಿಸಿ, ದಿಗ್ಗಜಗಳ ಮದೋದಕದಿಂದ ಕದಡಿದ ಬರಿಯ ನೀರೆನಿಸಿದೆ. ಅವನಿಗೆ ಹೆದರಿ ದೇವತೆಗಳು ಪುಷ್ಪಕ ವಿಮಾನ ಸಂಚಾರ ವಿಹಾರವನ್ನು ತೊರೆದಿದ್ದಾರೆ. ಯಾಜಕರು ಅಗ್ನಿಯ ಮುಖೇನ ಅರ್ಪಿಸಿದ ಹವಿಸ್ಸು ಇಂದು ಆ ಮಾಯಾವಿಯ ಬಾಯ್ ತುತ್ತು. ಇಂದ್ರನ ತುರಗರತ್ನ ಉಚ್ಚೈಃಶ್ರವಸ್ಸು ಕೂಡ ಅವನ ಪಾಲಾಗಿದೆ.

ಇಂತಹ ಕ್ರೂರ ತಾರಕನೆದುರು ದೇವತೆಗಳು ಕೈಕೊಂಡ ಸರ್ವೋಪಾಯ ಗಳೂ ವ್ಯರ್ಥವಾಗಲಾಗಿ, ಬೇರೆಯ ಉಪಾಯಗಾಣದ ಅವರು ಬ್ರಹ್ಮನ ಮುಂದೆ ಪ್ರಾರ್ಥಿಗಳಾಗಿ ನಿಂತಿದ್ದಾರೆ; ಅಸುರಹರ ಸೇನಾಧಿಪತಿಯನ್ನು ಬಯಸುತಿದ್ದಾರೆ. ಅವನ ನೇತೃತ್ವದಲ್ಲಿ ಇಂದ್ರನು ತಾರಕನನ್ನು ಜಯಿಸಬಯಸುತ್ತಾನೆ.

ದೇವತೆಗಳ ಪರವಾಗಿ ಗುರು ಬಿನ್ನವಿಸಿದ ಅರಿಕೆಗೆ ಬ್ರಹ್ಮನು ಸೂಚಿಸಿದ ಪರಿಹಾರವೇನು ?

ತನ್ನಿಂದ ಸೃಷ್ಟಿಕಾರ್ಯ ಸಾಧ್ಯವಿಲ್ಲ. ತಾರಕನನ್ನು ಜಯಿಸಬಲ್ಲವನೆಂದರೆ ಒಬ್ಬನೆ: ಈಶ್ವರನ ಕುಮಾರ. ಆದರೆ, ಈಶ್ವರ ಈಗ ತಪೋಮಗ್ನ! "ಶಂಭುವಿನ ಸಂಯಮಸ್ತಿಮಿತ ಮನವದನು ಉಮೆಯ ಸೌಂದರ್ಯದಿಂದ ನೀಂ ಸೆಳೆಯ ಲೆತ್ನಿಸಿರಿ." ಇದೇ ಬ್ರಹ್ಮನು ಸೂಚಿಸಿದ ಉಪಾಯ.

ದೇವತೆಗಳ ಮೇಲೆ ಗುರುತರವಾದ ಕಾರ್ಯಭಾರವೇ ಬಿದ್ದಹಾಗಾಯಿತು.

## ಇಂದ್ರ–ಮದನ ಸಂವಾದ

ಕಾವ್ಯದ ಮುಂದಿನ ಘಟ್ಟ, ನಾಟಕೀಯ ಸನ್ನಿವೇಶ, ಇಂದ್ರನು ಈಶ್ವರ ತಪೋಭಂಗ ಕಾರ್ಯಕ್ಕೆ ಮನ್ಮಥನನ್ನು ನಿಯೋಜಿಸಿದ್ದು; ಆ ಸಂದರ್ಭದಲ್ಲಿ ಅವರಿಗೆ ನಡೆದ ಸಂವಾದ, ಅದರ ಸ್ವಾರಸ್ಯ.

ಬ್ರಹ್ಮನ ಸಮ್ಮುಖದಿಂದ ದೇವತೆಗಳು ದಿವಕ್ಕೆ ಮರಳಿದ ಮೇಲೆ, ಕಾರ್ಯೋತ್ಸಾಹ ಪೂರ್ಣನಾದ ಇಂದ್ರನು "ಕಂದರ್ಪ ತಕ್ಕನೆಂಬದಕೆ ತಾಂ ನಿರ್ಣಯಿಸಿ, ಸ್ಮರನ ಸ್ಮರಿಸಿದನು."

ಇಂದ್ರನು ನೆನೆದೊಡನೆಯೆ ತನ್ನ ರಮ್ಯಧನುವನ್ನು ಕೊರಳಲ್ಲಿ ಧರಿಸಿ, ಮದನನು ಇಂದ್ರನ ಮುಂದೆ 'ಅಂಜಲಿಯ ನಮನ ಸಲಿಸಿ' ನಿಂತನು.

ಇಲ್ಲಿ ಕವಿ ಇಂದ್ರ ಸಭೆಯನ್ನು ವರ್ಣಿಸಿಲ್ಲ; ಅದು ತುಂಬಿದ ಸಭೆ ಎಂಬುದು "ತ್ರಿದಶರನು ತೊರೆದವನೊಳಾ ಮಘವನು ಹರಿಯಿಸಿದನೊರ್ಮೆಯೆ

ವಿಲೋಚನ ಸಹಸ್ರವನು" ಎಂಬ ಮಾತಿನಿಂದ ಸ್ಪಷ್ಟವಾಗುತ್ತದೆ. ಕವಿಯ ದೃಷ್ಟಿಯೆಲ್ಲ ಇಂದ್ರ ಮದನರ ಮಾತುಕತೆ, ಭಾವಭಂಗಿ, ಚರ್ಯೆಗಳ ಮೇಲೆ ಕೇಂದ್ರೀಕೃತವಾಗಿದೆ. ನಾಲ್ಕಾರು ಪದಪುಂಜಗಳಲ್ಲಿ, ಒಂದೆರಡು ಸಾಲಿನಲ್ಲಿ, ಇಬ್ಬರ ಮೂರ್ತಿಗಳನ್ನೂ ಕಡೆದು ನಿಲ್ಲಿಸುತ್ತಾನೆ ಕವಿ.

ಇಂದ್ರನಿಗೆ ಈಗ ಸ್ವಪ್ರಯೋಜನ ಸಾಧನೆಯಾಗಬೇಕಾಗಿದೆ. ಆದ್ದರಿಂದ, ಅವನು ಇತರ ದೇವತೆಗಳನ್ನು ಕಡೆಗಣಿಸಿ, ಮದನನಿಗೆ ಪಕ್ಕದ ಪೀಠವನ್ನು ಕೊಟ್ಟು ಅವನನ್ನು ವಿಶೇಷ ಅಭಿಮಾನದಿಂದ ಕಂಡದ್ದು ಕೇವಲ ಸಹಜ. ಆಶ್ರಿತರ ವಿಚಾರದಲ್ಲಿ ಪ್ರಯೋಜನಾಕಾಂಕ್ಷಿಗಳಾದ ಪ್ರಭುಗಳ ಚಿತ್ತ ಹರಿಯುವುದು ಹೀಗೆಯೇ ತಾನೆ?

ಸಭೆಯಲ್ಲಿ ಯಾರಿಗೂ ಸಲ್ಲದ ಗೌರವ ತನಗೆ ಸಂದಾಗ, ಕಂದರ್ಪನ ದರ್ಪ ಹೆಡೆಯಾಡತೊಡಗಿತು. ತನ್ನಿಂದ ಏನು ಕಾರ್ಯ ಸಾಧನೆಯಾಗಬೇಕಾಗಿದೆ ಎಂದು ಇಂದ್ರನನ್ನು ಬೆಸಗೊಂಡನು.

ಇಂದ್ರಪದವಿಯನ್ನು ಬಯಸಿ ಅವನ ಅಸೂಯೆಯನ್ನು ಕೆರಳಿಸಿರುವ ತಪಸ್ವಿ ಯಾರು? ತಿಳಿಸಿದರೆ ಸಾಕು, ಅವನು ತನ್ನ ಬಿಲ್‌ಬಲ್ಮೆಗೆ ಒಳಗಾಗುವನು. ಭವ ಕ್ಲೇಶಕ್ಕೆ ಹೆದರಿ, ಮುಕ್ತಿಮಾರ್ಗವನ್ನು ಹಿಡಿದಿರುವ ಯಾವನವನು, ಇಂದ್ರನಿಗೆ ಬೇಡದವನು? ಚೆಲುವೆಯರ ಕಡೆಗಣ್ಣ ನೋಟದಿಂದ ಅವರನ್ನು ಬಂಧಿಸುವುದು ತನಗೆ ಕಷ್ಟವಲ್ಲ. ಎಂಥ ನೀತಿನಿಷ್ಠನೇ ಇರಲಿ, ಅವರ ಧರ್ಮ ಅರ್ಥಗಳನ್ನು ತನ್ನ ಪ್ರೇಮದೂತನ ನೆರವಿನಿಂದ ಹಾಳುಮಾಡುವುದು ದೊಡ್ಡದಲ್ಲ; ಆ ಹಗೆ ಯಾರೆಂದು ತಿಳಿಸಿದರೆ ಸಾಕು.

ಇದಿಷ್ಟು ಪುರುಷ ಪ್ರಪಂಚದ ಒಲ್ಮೆಯನ್ನು ಬಗ್ಗಿಸುವ ಮಾತಾಯಿತು. ಸ್ತ್ರೀ ಪ್ರಪಂಚದ ಸೊಕ್ಕನ್ನು ಮುರಿಯಲೂ ಮನ್ಮಥನು ಅಷ್ಟೇ ಸಮರ್ಥನು.

"ನನ್ನ ಚೆಲುವಿನಿಂದ ಯಾವಳು ನಿನ್ನ ಚಂಚಲ ಮನಸ್ಸನ್ನು ಹೊಕ್ಕಿರುವಳು? ದುಃಖವನ್ನಾದರೂ ಅನುಭವಿಸುತ್ತ ಒಬ್ಬ ಪತಿಯಲ್ಲಿಯೇ ನಿಷ್ಠೆಯಿಟ್ಟಿರುವ ವ್ರತ ತೊಟ್ಟ ಅವಳು ಲಜ್ಜೆಯನ್ನು ಬಿಟ್ಟು ತಾನಾಗಿ ಬಂದು ನಿನ್ನನ್ನು ಆಲಿಂಗಿಸಬೇಕೆಂದು ನೀನು ಬಯಸುವೆಯಾ"

"ಪ್ರಣಯಕ್ರೀಡೆಯಲ್ಲಿ ಅಪಚಾರಗೊಂಡು ಕೋಪವಶಳಾದ ಯಾವ ಸ್ತ್ರೀ, ನೀನು ಅವಳ ಕಾಲಿಗೆ ಬಿದ್ದು ಕೇಳಿಕೊಳ್ಳುತ್ತಿದ್ದರೂ ನಿನ್ನನ್ನು

ಡೆಗಣಿಸಿರುವವಳು? ಅಂಥವಳು ಚಿಗುರ ಹಾಸಿನಲ್ಲಿ ವಿರಹತಾಪದಿಂದ ೂರಳಾಡುವಂತೆ ಮಾಡುತ್ತೇನೆ.

"ಇನ್ನು ನಿನ್ನ ವಜ್ರಾಯುಧಕ್ಕೆ ವಿಶ್ರಾಂತಿಯನ್ನು ಕೊಡು. ಅದೇ ನನಗೆ ರಮಾನುಗ್ರಹ. ನನ್ನ ಬಾಣಪ್ರಯೋಗದಿಂದ ನಿನ್ನ ಯಾವ ಹಗೆಯನ್ನು ಲ್ಲಲಿ? ನನ್ನದು ಹೂವಿನ ಬಾಣವೆಂದು ಶಂಕಿಸಬೇಡ. ನಿನ್ನ ದಯೆಯೊಂದಿದ್ದರೆ, ಸಂತನ ನೆರವಿನಿಂದ ಪಿನಾಕಪಾಣಿಯಾದ ಹರನನ್ನೇ ಧೈರ್ಯಗುಂದಿಸುವೆನು. ನ್ನು ಇತರ ಬಿಲ್ಲುಗಾರರೆಷ್ಟರವರು?"

ಮನ್ಮಥನು ಹೀಗೆ ತನ್ನ ಪ್ರತಾಪವನ್ನು ಕೊಚ್ಚಿಕೊಂಡದ್ದು ಹೆರರ ದೃಷ್ಟಿ ಯಲ್ಲಿ ಗರ್ವಪ್ರದರ್ಶನವಾಗಿ ಕಾಣಬಹುದು. ಆದರೆ, ಆ ನುಡಿಗಳನ್ನು—ತನ್ನ ುನೋರಥಕ್ಕೆ ಪುಷ್ಟಿಕೊಟ್ಟು ನುಡಿದ ಮದನನ ಮಾತುಗಳನ್ನು ಕೇಳಿ ಇಂದ್ರನಿಗೆ, ಮನಸ್ಸಿನ ದೊಡ್ಡ ಹೊರೆ ಇಳುಹಿದಂತಾಯಿತು. ಬಿಗಿಯಿಂದ ಕುಳಿತಿದ್ದವನು ಸ್ವಲ್ಪ ಬಿಡು ಬೀಸಾಗಿ ಕುಳಿತನು. ಮನ್ಮಥನು ಕೈಗೊಳ್ಳ ಬೇಕಾಗಿದ್ದ ಕಾರ್ಯಭಾರವನ್ನು ಅವನಿಗರುಹಿದನು.

ಇಂದ್ರನು ಸಂದರ್ಭಕ್ಕೆ ತಕ್ಕಂತೆ ಮದನನ ಪರಾಕ್ರಮವನ್ನು ಕೊಂಡಾಡು ತ್ತಾನೆ ಎಂಥ ಬಲಶಾಲಿಯಾದರೂ ಅವನನ್ನು ಹೊಗಳಿಕೆಯಿಂದ ಹುರಿದುಂಬಿಸ ಬೇಕಾದ್ದು ಅವಶ್ಯಕ. ಕಾರ್ಯವಾಸಿಯಾದ ಇಂದ್ರನೂ ಈ ('ಸ್ತೋತ್ರಂ ಕಸ್ಯ ನ ತುಷ್ಟಯೇತ್?') ರಹಸ್ಯವನ್ನು ಬಲ್ಲನು. ತನ್ನ ವಜ್ರಾಯುಧವನ್ನು ಬಿಟ್ಟರೆ ಎರಡನೆಯ ಆಯುಧವೇ ಮದನ; ಅವನು ಸರ್ವೋಪಪನ್ನ, ಸರ್ವತೋಗಾಮಿ, ಸಾಧಕ, ತನ್ನ ಸರಿದೊರೆ—ಅನಂಗನನ್ನು ಕುರಿತ ಇಂದ್ರನ ಹೊಗಳಿಕೆಯ ನುಡಿ ಗಳಿವು. ವಿಷ್ಣು ತನ್ನ ದೇಹವನ್ನು ಹೊರಲು ಭೂಭಾರವನ್ನು ಹೊರಬಲ್ಲ ಶೇಷ ನನ್ನಲ್ಲದೆ ಇನ್ನು ಯಾರನ್ನು ತಾನೆ ನಿಯೋಜಿಸಿಯಾನು? ಅಂತೆಯೆ, ಮನ್ಮಥನ ಸಾಮರ್ಥ್ಯವನ್ನರಿತೇ ಮಹತ್ವದ ಕಾರ್ಯಕ್ಕೆ ಅವನನ್ನು ಗೊತ್ತುಮಾಡಿರುವುದಾಗಿ ಇಂದ್ರನು ಹೇಳುವನು. ಅಲ್ಲದೆ, ಪಿನಾಕಪಾಣಿಯನ್ನು ಬೇಕಾದರೂ ಹುರುಳು ಗೆಡಿಸಲು ತಾನು ಅರ್ಹನು ಎಂದು ಮದನನು ಮೊದಲೇ ಸೊಕ್ಕಿ ನುಡಿದಿದ್ದಾನೆ. ಈಗ ಅವನಿಂದ ಆಗಬೇಕಾಗಿರುವ ಕಾರ್ಯವಾದರೂ ಅದೇ. ಮನ್ಮಥನ ಬಾಯಿಂದ 'ಆ ವೃಷಾಂಕನ ಕುರಿತ ಶರಗತಿ ಕಥನ' ಮೊದಲೇ ನಡೆದು ಬಿಟ್ಟಿರುವುದರಿಂದ, ಅವನು ತಾವು (ದೇವತೆಗಳು) ವಹಿಸಲಿರುವ ಕಾರ್ಯವನ್ನು

ಒಪ್ಪಿಕೊಂಡ ಹಾಗೆಯೇ ಎಂದು ತಿಳಿಸಿ, ಆ ಕಾರ್ಯವೇನೆಂಬುದನ್ನು ಅವನಿ
ಇಂದ್ರನು ಅರುಹುತ್ತಾನೆ. ಇಂದ್ರನ ವಾಕ್ಚಾತುರ್ಯ ಪ್ರಶಂಸನೀಯ.

ಈಶ್ವರನ ತಪೋಭಂಗ ಕಾರ್ಯದಲ್ಲಿ ಮದನನ ಪಾತ್ರವನ್ನು ಸ್ಪಷ್ಟಪಡಿಸು
ಇಂದ್ರನ ಮಾತುಗಾರಿಕೆಯಲ್ಲಿ ವಾದನಿಪುಣನ ವಾಗ್ – ವಿದಗ್ಧತೆಯನ್
ಕಾಣುತ್ತೇವೆ :

“ ದೇವಕಾರ್ಯವನ್ನು ಸಲ್ಲಿಸುವುದಕ್ಕಾಗಿ ನೀನಿನ್ನು ನಡೆ, ಗೆಲುವನ್ನು ಪಡೆ
ನಿನಗೆ ಒಪ್ಪಿಸಿರುವ ಕಾರ್ಯವಾದ ಈಶ್ವರ ತಪೋಭಂಗದಿಂದ ಮಾತ್ರ ತಾರಕನ
ಸಂಹಾರ ಸಾಧ್ಯ. ಸಸ್ಯದ ಹುಟ್ಟಿಗೆ ಬೀಜ ಮುಖ್ಯವಾದರೂ, ನೀರಿನ ನೆರವಿಲ್ಲದೆ
ಅದು ಹೇಗೆ ಹುಟ್ಟೀತು ? ಆದ್ದರಿಂದ, ತಾರಕ ಸಂಹಾರಕ್ಕೆ ನೀನೀಗ ಆದಿ ಕಾರಣ.
ದೇವತೆಗಳ ವಿಜಯಕ್ಕೆ ಮಹೇಶ್ವರನೇ ಸಾಧನೋಪಾಯ ; ಅವನು ನಿನ್ನ ಬಾಣದ
ಪ್ರಭಾವಕ್ಕೆ ಮಾತ್ರ ಒಳಗಾಗತಕ್ಕವನೆಂದಮೇಲೆ, ನೀನು ನಿಜವಾಗಿ ಧನ್ಯ. ನಿನ್ನ
ಕೈಕೊಂಡ ಕಾರ್ಯ ಈಗ ಅಪ್ರಸಿದ್ಧವಾಗಿರಬಹುದು; ಆದರೆ, ಅದು ಬೇರೆ
ಯಾರಿಂದಲೂ ಸಾಧ್ಯವಲ್ಲದ್ದರಿಂದ, ಅಸಾಧಾರಣ. ಕಡೆಯಲ್ಲಿಯಾದರೂ ಅದು
ಲೋಕಪ್ರಸಿದ್ಧವಾಗುವುದು. ನಿನ್ನ ಕಾರ್ಯದ ಮಹತ್ವ ಮೂರು ಲೋಕಗಳಿಗೂ
ಅನ್ವಯಿಸತಕ್ಕದ್ದು. ಅದರಿಂದ ಮೂರು ಲೋಕಗಳಿಗೂ ನೆಮ್ಮದಿಯುಂಟಾಗಲಿದೆ;
ನಿನ್ನನ್ನು ಈ ಕಾರ್ಯಕ್ಕೆ ಪ್ರಾರ್ಥಿಸಿಕೊಳ್ಳುತ್ತಿರುವವರಾದರೋ, ಸಾಮಾನ್ಯರಲ್ಲ,
ದೇವತೆಗಳು; ಅಲ್ಲದೆ, ಇತರರ ಬಾಣ ಪ್ರಯೋಗಗಳಿಂದಾಗುವಂತೆ ನಿನ್ನ ಬಿಲ್ಲು
ಹೊಡೆತದಿಂದ ಯಾರಿಗೂ ಹಿಂಸೆಯಾಗದು. ನಿನ್ನದು ಅಹಿಂಸಾಯುದ್ಧ! ಇಂಥ
ನಿನ್ನ ಪರಾಕ್ರಮ ಆಶ್ಚರ್ಯಕರವಲ್ಲವೇನಯ್ಯಾ! ಇಷ್ಟರ ಜೊತೆಗೆ, ಅಗೊ, ನಿನ್ನ
ಗೆಳೆಯ ವಸಂತನು ಅಪ್ರಾರ್ಥಿತನಾಗಿ ನಿನ್ನ ನೆರವಿಗಾಗಿ ಬಂದು ನಿಂತಿದ್ದಾನೆ.”

ಮದನನು ಪ್ರಭುವಿನ ಅಪ್ಪಣೆಯನ್ನು ಪ್ರಸಾದದಂತೆ ಶಿರಸಾವಹಿಸಿ
ನಡೆದನು. ಮಾತಿನ ಹೊಗಳಿಕೆ ಮುಗಿದಿತ್ತು : ಐರಾವತದ ಸೊಂಡಿಲನ್ನು ತಟ್ಟಿ
ತಟ್ಟಿ ಒರಟಾಗಿದ್ದ ಕೈಗಳಿಂದ ಇಂದ್ರನು ಮನ್ಮಥನ ಮೈದಟ್ಟಿ ಕಳಿಸಿಕೊಟ್ಟನು.

ಕಾಳಿದಾಸನ ನಾಟಕೀಯ ದೃಷ್ಟಿ ಈ ಸ್ವಾರಸ್ಯವಾದ ಸನ್ನಿವೇಶವನ್ನು ಈ
ರೀತಿ ಅರ್ಥಪೂರ್ಣವಾಗಿ ಮುಗಿಸುತ್ತದೆ.

## ಮದನ ದಹನ

ಮೂರನೆಯ ಸರ್ಗದ ಪೂರ್ವಭಾಗ ಮದನ ನಿಯೋಜನವಾದರೆ, ಮಧ್ಯ
ಭಾಗ ಮದನ ಜೈತ್ರಯಾತ್ರೆ ; ಉತ್ತರಭಾಗ, ಮದನನ ವಿಫಲ ತಪೋಭಂಗ

ಪ್ರಯತ್ನ–ಮದನ ದಹನ. ಮದನ ನಿಯೋಜನ ಪ್ರಕರಣವನ್ನು ಮೇಲೆ ನಿರೂಪಿಸಿದೆ.

ಮದನನ ಜೈತ್ರಯಾತ್ರೆಯ ಭಾಗ ಪ್ರಧಾನವಾಗಿ ವರ್ಣನಾತ್ಮಕ ; ಈ ಜೈತ್ರ ಯಾತ್ರೆಯಲ್ಲಿ ಚೈತ್ರಪಾತ್ರವೇ ಹಿರಿದು. 'ಅಕಾಲ ವಸಂತೋದಯದ ವರ್ಣನೆಯಲ್ಲಿ ಕವಿ ತನ್ನ ಕವಿತಾಶಕ್ತಿಯನ್ನು ಹೊಯ್ದಿರುವ ಅಚ್ಚೇ ಬೇರೆ.

ಮದನನ 'ಕಾರ್ಯವಿಜಯಕೆ ವ್ಯೈಯನಳಿವ ಕೃತನಿಶ್ಚಯ'ನಾಗಿ ಹರನ ಹೈಮಾಶ್ರಮಕ್ಕೆ ತೆರಳುತ್ತಾನೆ. ಗೆಳೆಯ ಮಾಧವನೂ ರತಿದೇವಿಯೂ ಅವನನ್ನು ಹಿಂಬಾಲಿಸಿದ್ದಾರೆ. ಹರನ ತಪೋವನವನ್ನು ಕಂಡ ಕೂಡಲೆ ವಸಂತನು ವಿಜೃಂಭಿಸುತ್ತಾನೆ. ಈಶ್ವರನ ತಪೋಭಂಗಕ್ಕಾದರೆ ಮನ್ಮಥನ ನನೆಗಣೆ ಬೇಕು ; ಇತರ ಮುನಿಜನದ ತಪಸ್ಸನ್ನು ಕೆಡಿಸಲು ವಸಂತನ ಮೃದುಪ್ರಭಾವವೇ ಸಾಕು. ಮನ್ಮಥನ ಸಂಗಡಿಗರಾಗಿ ಇಂದ್ರನು ಅಪ್ಸರೆಯರನ್ನೂ ಅಟ್ಟಿದ್ದನೆಂದು ಕಾಣುತ್ತದೆ. ಅವರ ಇಂಚರವನ್ನಾಲಿಸಿ ಹರನೇನೋ ಆ ಕ್ಷಣದಲ್ಲಿ ಅಂತರ್ಮುಖಿಯಾಗುವನು.

ಮುಂದಿನ ಘಟನಾವಳಿಯೆಲ್ಲ ಕವಿ ನಿರೂಪಣೆಯ ಮೂಲಕ ಚಿತ್ರವತ್ತಾಗಿ ಮೂಡಿ ನಿಲ್ಲುತ್ತದೆ, ಸಂಪೂರ್ಣವಾಗಿ ದೃಶ್ಯಮಾನವಾಗುತ್ತದೆ. ಆಧುನಿಕ ಯುಗದ ಉಪಮಾನವನ್ನು ಕೊಡಬಹುದಾದರೆ, ಮೂಕ (ಶಬ್ದರಹಿತ) ಚಲನಚಿತ್ರ ದೃಶ್ಯಾ ವಳಿಯನ್ನು ನೋಡಿದಂತೆ ಭಾಸವಾಗುತ್ತದೆ.

ವಸಂತೋದಯದ ಪ್ರಭಾವದಿಂದಾಗಿ ಹರನ ಪರಿವಾರವಾದ ಪ್ರಮಥಗಣ ಗಳೆಲ್ಲ ಚಿತ್ತಚಾಂಚಲ್ಯಕ್ಕೆ ಪಕ್ಕಾಗಿದ್ದಾರೆ. ಆಗ, ಈಶ್ವರನ ತಪಸ್ಸಿನ ಬಳ್ಳಿಮನೆಯ ಬಾಗಿಲಿನಲ್ಲಿ ನಿಂತಿದ್ದ ನಂದಿಯು ಬಲಗೈಯ ಹೊನ್ನಕಟ್ಟಿಗೆಯನ್ನು ಎಡಗೈಗೆ ತಂದು, ಬಾಯ ಮೇಲೆ ಬೆರಳಿಟ್ಟು "ಚಪಲತೆಯನುಳಿಯಿರಿ" ಎಂದು ಗಣಗಳಿಗೆ ಆಜ್ಞೆ ಮಾಡುತ್ತಾನೆ. ಕೇವಲ ಅಭಿನಯ ಪ್ರಧಾನವಾದ ಈ ಸನ್ನಿವೇಶ ಮನೋಜ್ಞವಾಗಿದೆ.

ನಂದಿಯ ಆಜ್ಞೆಯ ಪರಿಣಾಮವಾಗಿ, ಮರದಲುಗಾಟ, ದುಂಬಿಯ ಸಡಗರ, ಹಕ್ಕಿಯ ಚಿಲಿಪಿಲಿ, ಮೃಗಚಲನೆ--ಎಲ್ಲವೂ ನಿಂತು, ಕಾಡೆಲ್ಲವೂ 'ಚಿತ್ರಾರ್ಪಿತಾ ರಂಭ'ವಾಗುತ್ತದೆ. ಶಾಂತ ವಾತಾವರಣ ನೆಲಸುತ್ತದೆ. ಎಂಥ ಶಾಂತಿ! ಮದನ ದಹನ, ರತಿಯ ಮೂರ್ಛೆ, ಗಿರಿಜೆಯ ತಿರಸ್ಕಾರ, ಅವಳ ನಿರಾಶೆ–ಎಲ್ಲ ಕ್ಷಣಮಾತ್ರ ದಲ್ಲಿ ಭರ್‍ರನೆ ಬೀಸಿಹೋಗುವ ಬಿರುಗಾಳಿಯ ಮುನ್ನಿನ ಕಡಲ ಶಾಂತಿ! ಈ ಶಾಂತ

ವಾತಾವರಣದಲ್ಲಿ ಸಮಾಧಿಸ್ಥನಾದ ಶಂಕರನು ಶಾಂತಮೂರ್ತಿಯಾಗಿ, ಆ ಸ್ತಬ್ಧ ಸೃಷ್ಟಿ ಸರ್ವಸ್ವದ ಪ್ರತೀಕವಾಗಿ ಕುಳಿತಿದ್ದಾನೆ:

ವೃಷ್ಟಿಸಂರಂಭವಿರದಂಬುವಾಹನನಂತೆ ಊರ್ಮಿ ಮಾಲೆಗಳಿರದ
ಶರಧಿಯಂತೆ ಅನಿಲನಾಂದೋಲವಿರದಸ್ಖಲಿತ ಶಿಖಿಯಂತೆ
ಕೃತಮರುತ್ಸಂಚಾರ ರುದ್ಧನಲ್ತೆ !

ಕೆಳಕ್ಕೆ ಬೀರುತಿದ್ದ ನಂದಿಯ ದೃಷ್ಟಿಯನ್ನು ಪರಿಹರಿಸಿಕೊಂಡು, ನಮೇರು ವೃಕ್ಷಗಳಿಂದ ತುಂಬಿದ್ದ ಈಶ್ವರನ ಆಶ್ರಮವನ್ನು ಪ್ರವೇಶಿಸಿದ ಅನಂಗನು, 'ಮನದೊಳುಂ ಧುರ್ಧರ್ಷನಾದಸಮನೇತ್ರನನು' ಅನತಿ ದೂರದಿಂದಲೆ ನೋಡಿದನು. ಯಾರನ್ನು ಮನಸ್ಸಿನಲ್ಲಿ ಕೂಡ ಆಕ್ರಮಿಸಲು ಸಾಧ್ಯವಿಲ್ಲವೊ ಅಂಥ ಪರಶಿವನ ಮುಂದೆ ಪ್ರತಾಪವನ್ನು ಮೆರೆಯಲು ಮದನನು ಬಂದು ನಿಂತಿದ್ದಾನೆ. ಇಂದ್ರನೆದುರು ಅವನು ಕೊಚ್ಚಿಕೊಂಡ ಪ್ರತಾಪವೆಲ್ಲ ಎಲ್ಲಿ ಹೋಯಿತೊ! ಅನಿರೀಕ್ಷಿತ ಭಯದಿಂದ ಅವನ ಕೈ ನಡುಗಿ, ಕೈಯಿಂದ ಬಿಲ್ಲುಬಾಣಗಳು ಜಗುಳುತ್ತಿರುವುದನ್ನೂ ಅರಿಯದವನಾಗಿದ್ದಾನೆ.

ಹೀಗೆ ಬಲಗುಂದುತ್ತಿರುವ ಅಂಗಜನ ಪ್ರತಾಪಾಗ್ನಿಯನ್ನು ಬೆಳಗಲೋ ಎಂಬಂತೆ ವನದೇವತೆಯರಿಂದ ಪರಿವೃತಳಾಗಿ ಗಿರಿಜಾಕನ್ಯೆ ಕಾಣಿಸಿಕೊಳ್ಳುತ್ತಾಳೆ. ಮದನನ ನಂದುತ್ತಿದ್ದ ತೇಜಸ್ಸಿಗೆ ತೈಲವೆರೆದ ಅಂಗಜಾನಂದನೆಯ ಅಂದಚೆಂದಗಳನ್ನು ಈಗ ವರ್ಣಿಸದಿದ್ದರೆ, ದೃಶ್ಯದ ಸೊಬಗು ಕುಂದುವುದೆಂದು ಕಾಳಿದಾಸನು ಬಲ್ಲನು. ಅಂತೆಯೆ ವಸಂತೋಚಿತವಾದ 'ಅರುಣರಾಗ ವಸನ(ಕೆಂಪುವಸ್ತ್ರ)ವನ್ನುಟ್ಟು ಸುಗ್ಗಿ ಹೂದೊಡವುಗಳನ್ನು ತೊಟ್ಟು, ಮದನನ ಮದ್ದಾನೆಯಂತೆ ಬಿಂಕದಿಂದ ನಡೆದುಬಂದ ಗಿರಿಜೆಯ ಚಿತ್ರವನ್ನು ವರ್ಣಕೌಶಲ್ಯದಿಂದ ಚಿತ್ರಿಸಿದ್ದಾನೆ ಕಾಳಿದಾಸ.

ಉತ್ಸಾಹಗುಂದಿ ಬಳ್ಮೆಯುಡುಗಿ ದಿಕ್ಕುಗಾಣದೆ ನಿಂತಿದ್ದ ಮನ್ಮಥನು ಇದ್ದಕ್ಕಿದ್ದ ಹಾಗೆ ಗಿರಿಜೆಯನ್ನು ಕಂಡನು. ಚೆಲುವಿನಲ್ಲಿ ರತಿಯನ್ನೂ ಮೀರಿಸುವ ಅವಳನ್ನು ಕಂಡ ಕುಸುಮಚಾಪನು ಶೂಲಧರನನ್ನು ಇನ್ನು ಗೆಲ್ಲಲಾರ್ಪೆನೆಂದು ಮರಳಿ ನೆನೆದನು.

ಉಮೆ ತನ್ನ ಪತಿಯಾಗಲಿರುವ ಶಂಭುವಿನ ಎಲೆಮನೆಯ ಬಾಗಿಲ ಬಳಿ ಸಾರಿದಳು. ಆಗ ಈಶನು ಸಮಾಧಿಯಿಂದ ತಟ್ಟನೆ ಎಚ್ಚತ್ತನು. ಗಿರಿಜೆ ಮತ್ತು ಮನ್ಮಥರ ಸಹಯೋಗ ಇಷ್ಟರಮಟ್ಟಿಗೆ ಪ್ರಭಾವಶಾಲಿಯಾಗಿ ಪರಿಣಮಿಸಿತೆಂಬುದು ನಿಸ್ಸಂದೇಹ.

ಗಿರಿಜೆ ಸೇವೆಗೈಯಲು ಬಂದಿದ್ದಾಳೆ ಎಂದು ನಂದಿ ಬಿನ್ನವಿಸಲು, ಆಗಬಹುದೆಂದು ಹುಬ್ಬಿನ ಸನ್ನೆಯಿಂದಲೆ ಈಶ್ವರನು ಅನುಮತಿಯಿತ್ತನು. ಗೆಳತಿಯರೊಂದಿಗೆ ಈಶ್ವರನ ಸಮ್ಮುಖಕ್ಕೆ ಗಿರಿಜೆ ಬಂದಳು. ಮೊತ್ತಮೊದಲು ಪಾರ್ವತಿಯ ಪ್ರಿಯ ಸಖಿಯರು ಅವನಡಿಗಳಿಗೆ ಹೂಗಳನ್ನು ಸಮರ್ಪಿಸಿದರು. ಬಳಿಕ, 'ವೃಷಭಾಂಕನಡಿಗಳಿಗೋವಿ ನಮಿಸಿದಳುಮಾದೇವಿ'. 'ಅನನ್ಯಭಾಜಂ ಪತಿಮಾಪ್ನುಹಿ' (ಅನ್ಯಸ್ತ್ರೀಯರನ್ನು ಸೇವಿಸದ, ಎಂದರೆ ಏಕಪತ್ನೀವ್ರತಸ್ಥನಾದ, ಪತಿಯನ್ನು ಪಡೆ) ಎಂಬ ಭಾವೀಪತಿಯ ಆಶೀರ್ವಾದವೇ ಅವಳಿಗೆ ಲಭಿಸಿತು.

ಇದಕ್ಕಿಂತಲೂ ಒಳ್ಳೆಯ ಸದವಕಾಶ ಇನ್ನು ದೊರಕೀತೆ! ಇದನ್ನರಿತ ಕಾಮನು, ಶಂಭುವಿನ ಕಡೆಗೆ ಬಾಣವನ್ನು ಗುರಿಯಿಟ್ಟು, ಹೆದೆಯನ್ನು ಮಿಡಿದು ಟಂಕಾರ ಮಾಡಿದನು.

ಆ ಕ್ಷಣದಲ್ಲಿ ಗೌರಿ 'ಮಂದಾಕಿನೀ ಕಮಲ ಬೀಜಮಣಿ ಮಾಲೆಯನು, ತಾಪಸೋತ್ತಮ ಗಿರಿಶನಡಿಯ ಸಾರಿ' ಅರ್ಪಿಸಿದಳು. ಆ ಪ್ರೀತಿಯ ಕಾಣಿಕೆಯನ್ನು ಸ್ವೀಕರಿಸಲು ಈಶ್ವರನು ಅನುವಾದನು.

ಇತ್ತ, ಮನ್ಮಥನು ಸಂಮೋಹನವೆಂಬ ಅಮೋಘ ಶರವನ್ನು ಹೆದೆಗೇರಿಸಿದನು. ಇದರ ಪರಿಣಾಮ ಸ್ವಲ್ಪವಾದರೂ ಉಂಟಾಗದಿರಲಿಲ್ಲ. ಚಂದ್ರೋದಯದ ಪ್ರಾರಂಭದಲ್ಲಿ ಕಡಲು ಉಕ್ಕತೊಡಗುವಂತೆ ಹರನ ಸ್ಥೈರ್ಯ ಕೂಡ ತುಸ ಕಲಕಿತು. ಉಮೆಯ ಸುಂದರ ಮುಖವನ್ನು ನೋಡಲೆಂಬಂತೆ ಅವಳ ಕಡೆಗೆ ದೃಷ್ಟಿ ಬೀರಿದನು.

ಆಗ ಪಾರ್ವತಿಯ ಸ್ಥಿತಿಯೊ! ಸ್ವರೂಪವೊ! ಅವಳ ಹೃದಯದಲ್ಲಿ ಹರನನ್ನು ಕುರಿತು ಪ್ರೇಮ ತುಂಬಿ ತುಳುಕುತ್ತಿದೆ. ಅವಳ ಅಂತರ್ಗತವಾದ ಈ ಪ್ರೇಮಭಾವ ಅವಳ ದೇಹದಿಂದ ಹೊರಹೊಮ್ಮುತ್ತಿದೆ. ಈಗವಳು ಮೈತುಂಬ ಹೂತೊಟ್ಟ ಬಾಲ ಕದಂಬದಂತೆ, ಚಾರುತರಗಾತ್ರೆಯಾಗಿ ಈಶ್ವರನೆದುರು ನಿಂತಿದ್ದಾಳೆ. ಎಷ್ಟೇ ಗಟ್ಟಿ ಮನಸ್ಸು ಮಾಡಿಕೊಂಡರೂ ಅಧೀರಳಾಗದಿರುವಳೆ? ಲಜ್ಜೆಗೊಳ್ಳದಿರುವಳೆ? ಚಂಚಲಾಕ್ಷಿಯಾಗಿ ಮುಖವನ್ನು ಓರೆ ಮಾಡಿಕೊಂಡು ಈಶ್ವರನನ್ನು ನೋಡುತ್ತ ನಿಂತಿದ್ದಾಳೆ.

ಒಂದು ಕಡೆ, ಬಾಣಪ್ರಯೋಗ ಮಾಡಲು ಅಣಿಯಾಗಿ ಹೊಂಚುಕಾಯುತ್ತಿರುವ ಮನ್ಮಥ; ಇನ್ನೊಂದು ಕಡೆ ಹರನನ್ನೊಲಿಸಿಕೊಳ್ಳಲು ಬಂದಿರುವ ಲಜ್ಜಾನ್ವಿತೆ, ಹರಮನೋಹರ ಕಾತುರೆ ಗಿರಿಜೆ; ನಡುವೆ, ಅದೇ ತಾನೆ ಸಮಾಧಿ

ಯಿಂದ ಎಚ್ಚತ್ತ ತ್ರ್ಯಂಬಕ, ಭವ್ಯಾಕೃತಿಯ ಭವ. ಎಂಥ ಸುಂದರ ದೃಶ್ಯ; ಸಂಗೀತದ ಹಿಮ್ಮೇಳದೊಂದಿಗೆ ನಟಿಸಲು ಯೋಗ್ಯವಾದ ಭಾವಪೂರ್ಣ ದೃಶ್ಯ. ಇಲ್ಲವೆ, ವರ್ಣಚಿತ್ರಕಾರರ ಕುಂಚದಿಂದ ಬಿಡಿಸಲು ತಕ್ಕ ಸುಂದರ ಚಿತ್ರ. ಪ್ರತಿಯೊಂದು ಪಾತ್ರದ ಭಾವಭಂಗಿಯನ್ನೂ ಕವಿ ತನ್ನ ಬಗೆಗಣ್ಣಿನಿಂದ ಕಂಡು, ನಾಟ್ಯ ದೃಶ್ಯವನ್ನು ನಿರ್ಮಿಸಿದ್ದಾನೆ.

ಈ ಸುಂದರ ದೃಶ್ಯ ಕ್ಷಣಿಕವಾದದ್ದು. ಏಕೆಂದರೆ, ಮರುಕ್ಷಣದಲ್ಲಿಯೇ ಅದು ದುರಂತ ದಾರುಣ ಚಿತ್ರವಾಗಿ ಮಾರ್ಪಡುತ್ತದೆ. ವಸಂತ ವೈಭವವನ್ನು ಕಾಳ್ಗಿಚ್ಚು ನುಂಗುತ್ತದೆ. ಪತಂಗ ಆ ಕಿಚ್ಚಿಗೆ ಬಿದ್ದು ಸುಟ್ಟು ಸೀಕರಿಹೋಗುತ್ತದೆ.

ಈಶ್ವರನು ತನ್ನ ಮನಸ್ಸಿನ ಕ್ಷೋಭೆಯನ್ನು ಬಲಾತ್ಕಾರದಿಂದ ಅಡಗಿಸಿಕೊಂಡು, ಮನೋವಿಕಾರಕ್ಕೆ ಕಾರಣವೇನೆಂದು ಸುತ್ತ ದೃಷ್ಟಿಯನ್ನು ಹರಿಸಿದನು. ಆಗ ಆಕರ್ಣಾಂತವಾಗಿ ಬಾಣವನ್ನು ಸೆಳೆದು ಅದನ್ನು ಇನ್ನೇನು ಬಿಡಬೇಕೆಂದಿದ್ದ ಮದನನು ಕಣ್ಣಿಗೆ ಬಿದ್ದನು.

ಶಂಕರನೀಗ ಭಯಂಕರವಾಗಿದ್ದಾನೆ. ತಪೋಭಂಗದಿಂದ ಅವನ ಕೋಪ ಮಿತಿಮೀರಿದೆ. ಹುಬ್ಬುಗಂಟಿನ ಅವನ ಮುಖ ನೋಡಲು ಅಸಾಧ್ಯವೆನಿಸಿದೆ. ಅವನ ಮೂರನೆಯ ಕಣ್ಣಿನಿಂದ ಅಗ್ನಿಜ್ವಾಲೆ ತಟ್ಟನೆ ಚಿಮ್ಮಿ ಹೊರನೆಗೆಯುತ್ತದೆ,

ದೇವತೆಗಳು ಅಂತರಿಕ್ಷದಲ್ಲಿ ಮನ್ಮಥ. ವಿಜಯವನ್ನು ಕುತೂಹಲಿಗಳಾಗಿ ನಿರೀಕ್ಷಿಸುತ್ತಿರುವಲ್ಲಿ, ಅವರು ಕಂಡುದೇನು? ಈಶ್ವರನ ಹಣೆಗಣ್ಣಿನಿಂದ ಹೊರಕ್ಕೆ ನೆಗೆದ ಅಗ್ನಿಜ್ವಾಲೆ! ಪರಿಣಾಮವೇನೆಂದು ಅವರಿಗೆ ಗೊತ್ತು.

"ಹೇ ಪ್ರಭೂ, ನಿನ್ನ ಕ್ರೋಧವನ್ನು ಅಡಗಿಸಿಕೋ!" ಎಂದು ಆರ್ತರಾಗಿ ಚೀರಿದರು. ಆದರೆ, ಕಾಲ ಮಿಂಚಿತ್ತು. ಅವರು ಹಾಗೆ ಕೂಗುವುದಕ್ಕೂ, ಹರನ ಹಣೆಗಣ್ಣ ಬೆಂಕಿ ಮನ್ಮಥನನ್ನು ಸುಟ್ಟು ಬೂದಿ ಮಾಡುವುದಕ್ಕೂ ಸರಿಹೋಯಿತು. ಅವರ ಮೊರೆ ವ್ಯರ್ಥವಾಯಿತು.

ಪತಿಯನ್ನು ಹಿಂಬಾಲಿಸಿದ್ದ ರತಿ–ಅಲ್ಲಿಯೇ ತುಸು ದೂರದಲ್ಲಿ ಎಲ್ಲವನ್ನೂ ನೋಡುತ್ತ ನಿಂತಿರಬೇಕು. ಪತಿ ಭಸ್ಮೀಭೂತನಾದುದನ್ನು ಕಣ್ಣೆದುರಿನಲ್ಲಿ ಕಂಡಳು. ಮಿಂಚಿನ ವೇಗದಲ್ಲಿ ಘಟನೆ ನಡೆದು, ಸಿಡಿಲೆರಗಿದಂತೆಯೇ ಆಯಿತು. ಸಹಿಸಲಸಾಧ್ಯವಾದ ತೀವ್ರ ದುಃಖದಿಂದ ಅವಳ ಇಂದ್ರಿಯಗಳು ನಿಶ್ಚೇಷ್ಟವಾದುವು. ಪ್ರಿಯನ ಸಾವನ್ನು ಕುರಿತು ನೆನೆಯಲೂ ಆಗದಂತೆ ಅವಳು ಮೂರ್ಛೆಹೋದಳು.

ತನ್ನ ತಪೋಭಂಗಕ್ಕೆ ಮನ್ಮಥನೊಬ್ಬನೇ ಕಾರಣನೆ? ಎದುರಿನಲ್ಲಿಯೆ ನಿಂತಿದ್ದಾಳೆ ಚೆಲುವೆ ಉಮೆ! ಕೋಪವೆಲ್ಲ ಅಗ್ನಿಯಾಗಿ ಉರಿದುಹೋಯಿತು. ತನ್ನ ಕೋಪಕ್ಕೆ ಎಡೆಯಿಲ್ಲ. ಅಲ್ಲದೆ ತನ್ನ ಹರಕೆಯನ್ನು ಪಡೆದವಳಲ್ಲವೆ ಇವಳು? ತನ್ನ ತಪೋವಿಘ್ನಕ್ಕೆ ಇವಳೂ ಕಾರಣಳೇ; ಅದರಲ್ಲಿ ಸಂದೇಹವಿಲ್ಲ. ಆದರೆ ಮಾಡುವುದೇನು? ಸ್ತ್ರೀ ಸನ್ನಿಧಾನವನ್ನೇ ತೊರೆಯುವುದು ಒಳ್ಳಿತೆಂದು ಬಗೆದು ಆ ಭೂತಪತಿ ತನ್ನ ಭೂತಗಣದೊಂದಿಗೆ ಆ ಸ್ಥಳವನ್ನೇ ತ್ಯಜಿಸಿ ಕಣ್ಮರೆಯಾದನು.

ತನ್ನ ತಂದೆಯ ಬಯಕೆ ಕೈಗೂಡಲಿಲ್ಲವೆಂದು ಕೊರಗುತ್ತ ತನ್ನ ದೇಹ ಸೌಂದರ್ಯ ವಿಫಲವಾಯಿತೆಂದು ಕುಗ್ಗುತ್ತ, ತನ್ನ ಗೆಳತಿಯರೆದುರೇ ಹೀಗಾಯಿತಲ್ಲಾ ಎಂದು ಲಜ್ಜೆಗೊಳ್ಳುತ್ತ, ನಿರಾಶಳಾಗಿ, ಶೂನ್ಯಹೃದಯಳಾಗಿ ಮನೆಯ ಕಡೆ ತಿರುಗಿದಳು ಗಿರಿಜೆ.

ರುದ್ರನ (ಶಂಕರನಲ್ಲ!) ಕೋಪದಿಂದ ಹೆದರಿ ಅನುಕಂಪಕ್ಕೆ ಪಾತ್ರಳಾದ ತನ್ನ ಮಗಳನ್ನು ತೋಳುಗಳಲ್ಲಿ ಎತ್ತಿಕೊಂಡು ಹಿಮವಂತನು ಕರೆದೊಯ್ದನು.

ಬಗೆಬಗೆಯ ಭಾವವಿಲಾಸಗಳಿಂದ ವರ್ಣೋಜ್ಜ್ವಲವಾದ ದೃಶ್ಯರೂಪದ ಸನ್ನಿವೇಶ ಮಾಲೆಯಿಂದ ಕೂಡಿದ ಮೂರನೆಯ ಸರ್ಗ ಇಂತು ಮುಗಿಯುತ್ತದೆ.

## ರತಿವಿಲಾಪ

ಇಡಿಯ ನಾಲ್ಕನೆಯ ಸರ್ಗ ರತಿಯ ವಿಲಾಪಕ್ಕೆ ಮೀಸಲಾಗಿದೆ. ಕವಿಕಲ್ಪನೆಯ ರಂಗಸ್ಥಳದಲ್ಲಿ ರತಿ ಏಕಾಕಿನಿ; ಮದನ ವಿರಹಿತಳಾದ ಅವಳು ಇಳೆಯಲ್ಲಿಯೆ ಏಕಾಕಿನಿ. ಮಾಗಿಯ ಕೋಗಿಲೆಯ ಒಂಟಿಕೂಗಿನಂತೆ, ಈ ಏಕಾಕಿನಿಯ ಅಳಲ ಮೊರೆ ನಮ್ಮ ಹೃದಯವನ್ನು ಹಿಂಡುತ್ತದೆ, ಕರುಳನ್ನು ಕೊಯ್ಯುತ್ತದೆ. ಕರುಣರಸ ಚಿಲುಮೆ ಚಿಮ್ಮಿ ಹೊನಲಿಡುತ್ತದೆ.

ಆದರೆ, ರತಿ ನಿಜವಾಗಿ ಏಕಾಕಿನಿಯಲ್ಲ; ಮದನನ ಗೆಳೆಯ ವಸಂತ ದೂರದಲ್ಲಿ ನಿಂತು ನಡೆದ ದುರ್ಘಟನೆಗೆ ಸಾಕ್ಷಿಯಾಗಿದ್ದಾನೆ; ಸ್ತಂಭೀಭೂತನಾಗಿದ್ದಾನೆ. ಕಲ್ಲನ್ನೂ ಕರಗಿಸುವ ರತಿಯ ರೋದನ ಅವನ ಎದೆಯನ್ನು ಕರಗಿಸಿದ್ದರೂ, ಇರಿಯುತ್ತಿದ್ದರೂ, ಮಾತಳಿದು ಮೌನವಾಗಿದ್ದಾನೆ. ಸಂತೈಕೆಗೂ ಸಮಯವುಂಟಷ್ಟೆ. ದುಃಖದ ಆವೇಗದಲ್ಲಿ ಸಮಾಧಾನದ ನುಡಿಗಳಿಗೆ ಸ್ಥಾನವಿಲ್ಲವೆಂದು ಅವನು ಬಲ್ಲನೆಂದು ಕಾಣುತ್ತದೆ. ರತಿಯ ಬಾಯಿಂದ ತನ್ನ ಹೆಸರು ಉಚ್ಚಾರವಾದಾಗ ಮಾತ್ರ ಅವನು ಅವಳ ಬಳಿಗೆ ಬರುತ್ತಾನೆ.

ಆಗಲಾದರೂ ಒಂದೆರಡು ಸಮಾಧಾನದ ನುಡಿಗಳನ್ನಾಡಲು ಅವನಿಗೆ

ಅವಕಾಶವಾಯಿತೆ? ಆಪ್ತರನ್ನು ಕಂಡಾಗ ತಾನೆ ಅಳಲು ಇಮ್ಮಡಿಸುವುದು. ಪತಿಯ ಸ್ನೇಹಿತನೆದುರು ಅವಳ ದುಃಖ ಮತ್ತೆ ಹೊಸದಾಗುತ್ತದೆ. ವಸಂತ ಕಾಣಿಸಿಕೊಂಡು, ಅವಳ ದುಃಖದ ತಂತಿಯನ್ನು ಮಿಾಟಿದಂತಾಗುತ್ತದೆ.

ಪ್ರತಿಭಾಶಾಲಿಯಲ್ಲದ ಕವಿಯ ಕೈಯಲ್ಲಿ ಬಹು ಬೇಗ ಬೇಸರವುಂಟು ಮಾಡಬಹುದಾದ ಸನ್ನಿವೇಶ ಇದು. ಮೊದಲಿಂದ ಕೊನೆಯವರೆಗೆ ಮಾತಾಡು ವವಳು ರತಿಯೊಬ್ಬಳೇ. ಕವಿಯೂ ಇದನ್ನು ಬಲ್ಲನು. ಅವಳ ದುಃಖವಾಹಿನಿಗೆ ಬೇರೆಯ ತಿರುವು ಕೊಡಲು ವಸಂತನನ್ನು ಅವನ ಸನಿಯಕ್ಕೆ ಕರೆತರುತ್ತಾನೆ.

ಇಷ್ಟೇ ಅಲ್ಲ: ಬೇರೆಯ ರೀತಿಯಲ್ಲಿಯೂ ಸನ್ನಿವೇಶ ಯೋಜನೆಯಲ್ಲಿ ಕವಿ ವೈವಿಧ್ಯವನ್ನು ಸಾಧಿಸಿದ್ದಾನೆ. ರತಿಯ ರೋದನ ಅರ್ಥವಿಲ್ಲದ ಹಲುಬು ನುಡಿಯೂ ಅಲ್ಲ, ಪತಿಯ ಗುಣಗಾನ ಮಾಡುವ ಬರಿಯ ವಿಶೇಷಣಗಳ ಮಾಲೆಯೂ ಅಲ್ಲ. ರತಿ ಶೋಕಿಸುವುದು ಸ್ವಂತ ವಿರಹಕ್ಕಾಗಿ ಮಾತ್ರವಲ್ಲ, ಸೃಷ್ಟಿ ಸಮಸ್ತವೂ ಅನುಭವಿಸುತ್ತಿರುವ ವಿರಹವೇದನೆಗಾಗಿ. ರತಿಯ ನಷ್ಟ ಪ್ರಪಂಚದ ನಷ್ಟವೂ ಹೌದು. ಕವಿಯ ಈ ದೃಷ್ಟಿ ರತಿವಿಲಾಪಕ್ಕೆ ಹೆಚ್ಚಿನ ಬೆಲೆ ಕೊಟ್ಟಿದೆ. ಅಲ್ಲದೆ, ಅವಳ ದುಃಖಗೀತದಲ್ಲಿ ರತಿ–ಮನ್ಮಥರ ಮಧುರ ದಾಂಪತ್ಯದ ಚಿತ್ರ ಸುಳಿಯುತ್ತದೆ; ಅವಳ ಗಾಢವಾದ ಪತಿಪ್ರೇಮ ಸುಸ್ಪಷ್ಟವಾಗುತ್ತದೆ; ಈ ಗಂಡ ಹೆಂಡಿರ ದಾಂಪತ್ಯದ ಸವಿಗೆ ವಸಂತನ ಸ್ನೇಹದ ಸಕ್ಕರೆ–ಬೆರಕೆಯ ಸೂಕ್ಷ್ಮ ಸಂಬಂಧದ ಪರಿಚಯವಾಗುತ್ತದೆ; ಈ ಎಲ್ಲ ಮಾನವೀಯ ಗುಣಗಳಿಗೆ ಗೋಪುರ ಕಟ್ಟಿದಂತೆ, ರತಿಯ ಪಾತಿವ್ರತ್ಯದ ಮಹಿಮೆ ಮುಗಿಲು ಮುಟ್ಟಿ ನಿಲ್ಲುತ್ತದೆ.

ಇನ್ನು, ಈ ಕಾವ್ಯ ಭಾಗದ ಸೌಂದರ್ಯಾಂಶಗಳೆಲ್ಲ ಹೇಗೆ ರೂಪತಾಳಿವೆ ಯೆಂಬುದನ್ನು ಪರಿಚಯ ಮಾಡಿಕೊಳ್ಳೋಣ.

ಪತಿಯ ಮರಣವನ್ನು ಕಂಡು ಮೂರ್ಛೆಹೋಗಿದ್ದ ರತಿಯನ್ನು ವಿಧಿ ಎಚ್ಚರಿಸಿತು. ಏತಕ್ಕಾಗಿ? ವೈಧವ್ಯದ ದುಃಖವೇನೆಂಬುದನ್ನು ಅವಳು ಅನುಭವಿಸಿ ತಿಳಿಯಲಿ ಎಂದು! ಕ್ರೂರ ವಿಧಿ ಎನಿಸುತ್ತದೆ.

ಮೂರ್ಛೆಯಿಂದ ಎಚ್ಚೆತ್ತ ರತಿ ಸುತ್ತಲು ಹುಡುಕು ನೋಟವನ್ನು ಬೀರಿದಳು. ತನ್ನ ಚೆಲುವನನ್ನು ಎಷ್ಟು ನೋಡಿದರೂ ತಣಿಯದಿದ್ದ ಅವಳ ಕಣ್ಣುಗಳಿಗೆ ಅವನು ಇನ್ನೆಂದಿಗೂ ಕಾಣಲಾರದವನಾಗಿದ್ದನೆಂಬುದನ್ನು ಅವಳು ಅರಿಯದಾದಳು. "ಜೀವಿಸಿರುವೆಯ ಜೀವಿತೇಶ್ವರ" ಎಂದು ಕೂಗಿಕೊಂಡೇ ಮೇಲೆದ್ದಳು. ಪತಿಯ ಸಾವನ್ನು ಕಂಡಿದ್ದರೂ ಮೂರ್ಛೆಯಲ್ಲಿ ಮೈಮರೆತಿದ್ದ

ಅವಳಿಗೆ ಪತಿ ಬದುಕಿರುವನೆಂದೇ ಎಣಿಕೆ. ಅವನ ಸಾವಿನಲ್ಲಿ ನಂಬಿಕೆಯಿಲ್ಲ. ಆದರೆ, ಆ ಸಾವಿಗೆ ಸಾಕ್ಷಿಯಾಗಿ, ಹರನ ಕೋಪಾಗ್ನಿಯಿಂದ ಭಸ್ಮೀಭೂತವಾಗಿದ್ದ ಪುರುಷ ರೂಪವು ಕಣ್ಣಿಗೆ ಬಿದ್ದ ಕೂಡಲೆ, ನಂಬದಿರುವುದಾದರೂ ಹೇಗೆ? ಅವಳ ದುಃಖದ ಕಟ್ಟೆ ಒಡೆಯಿತು. ದೂಳಿನಲ್ಲಿ ಹೊರಳಾಡಿ, ಮುಡಿಗೆದರಿ, ಕಾಡೆಲ್ಲ ಮರುಗುವಂತೆ ರೋದಿಸತೊಡಗಿದಳು. ತನ್ನ ಪತಿಯ ಅನುಪಮ ಸೌಂದರ್ಯದ ದೇಹವು ಸುಟ್ಟು ಬೂದಿಯಾಗಿದ್ದರೂ ತಾನು ಮಾತ್ರ ದುಃಖದಿಂದ ಬಿರಿಯದೆ ಬದುಕಿರುವುದು ಸ್ತ್ರೀಯರ ಕಠಿನ ಹೃದಯಕ್ಕೆ ಸಾಕ್ಷಿ ಎಂದು ತನ್ನನ್ನು ತಾನು ಹಳಿದುಕೊಂಡಳು. ಅಥವಾ, ತನ್ನ ತಪ್ಪಾದರೂ ಏನಿದೆ? ತನ್ನ ಜೀವ ಮದನನ ಅಧೀನದಲ್ಲಿಯೇ ಇರಲಿಲ್ಲವೆ? ಆಮರಣಪರ್ಯಂತದ ಸ್ನೇಹದ ಕಟ್ಟನ್ನು ಕತ್ತರಿಸಿ ಕೊಂಡು, 'ಕ್ಷಣಭಿನ್ನ ಸೌಹೃದ'ನಾಗಿ ತನ್ನನ್ನುಳಿದು ಮದನನು ಎಲ್ಲಿಗೋ ಹೊರಟು ಹೋಗಬಹುದೆ? ಏಕೆ ಈ ಅರ್ಥವಾಗದ ಅಗಲಿಕೆ? ತನ್ನ ಬಗೆಗೆ ಅವನು ಅಪ್ರಿಯವನ್ನೆಸಗಿದವನಲ್ಲ; ತಾನಾದರೂ ಅವನ ಬಗೆಗೆ ಪ್ರತಿಕೂಲೆ ಯಾದವಳಲ್ಲ. ಹೀಗಿದ್ದೂ, ಹಲುಬುತ್ತಿರುವ ತನಗೆ ನಿಷ್ಕಾರಣವಾಗಿ ದರ್ಶನ ವೀಯದಿರುವನಲ್ಲ!

ಇದಿಷ್ಟು ರತಿವಿಲಾಪ ಗೀತೆಯ ಪಲ್ಲವಿ. ಮುಂದಿನ ನುಡಿಗಳೇ ಬೇರೆ. ಮೊದಲು, ತಮ್ಮ ದಾಂಪತ್ಯದ ಕೆಲವು ರಸನಿಮಿಷಗಳನ್ನು ನೆನೆಯುತ್ತಾಳೆ. ಶೋಕದಲ್ಲಿ ಸವಿ; ಮೃತವನ್ನು ಮೆಟ್ಟನಿಂತ ಅಮೃತ. ಕರುಣಕ್ಕೆ ಮೆರುಗು ಕೊಡುವ ಶೃಂಗಾರ!

ಮದನನು ಯಾವಾಗಲೋ ಒಮ್ಮೆ ವಿಸ್ಮರಣೆಯಲ್ಲಿದ್ದಾಗ ಪರಸ್ತ್ರೀಯ ಹೆಸರನ್ನು ಉಚ್ಚರಿಸಿಬಿಟ್ಟನು. ರತಿಯಂಥ ಪತಿವ್ರತೆ ಇದನ್ನು ಹೇಗೆ ಸಹಿಸಿ ಯಾಳು? ಗಂಡನಿಗೆ ತಕ್ಕ ಶಾಸ್ತಿ ಮಾಡಿದಳು. ತನ್ನ ಮೇಖಲೆಯಿಂದ ಅವನನ್ನು ಕಟ್ಟಿದಳು; ತನ್ನ ಕರ್ಣಾಭರಣವಾದ ನೈದಿಲೆ ಹೂವಿನಿಂದ ಅವನ ಮುಖಕ್ಕೆ ಹೊಡೆದಳು. ಈ ಪ್ರೇಮಕಲಹದ ಸಂಗತಿಯನ್ನು ನೆನೆದು, "ಸ್ಮರನೆ, ಇದನ್ನು ಸ್ಮರಿಸುವೆಯಾ?" ಎಂದು ರತಿ ಈಗ ಪ್ರಶ್ನಿಸುತ್ತಾಳೆ.

ತನ್ನನ್ನು ಒಲಿಸಲು, ಮನ್ಮಥನು 'ನಿನ್ನ ಹೃದಯದಲ್ಲಿಯೇ ಇರುವೆ'ನೆಂದು ಹೇಳುತ್ತಿದ್ದನು. ಆದರೆ, ಅದು ಮೋಸದ ಮಾತೆಂದು ಈಗ ಬಗೆಯಬೇಕಾಗಿದೆ. ಅದು ಉಪಚಾರದ ಮಾತಾಗಿರದೆ ನಿಜವಾಗಿದ್ದ ಪಕ್ಷದಲ್ಲಿ, ತನ್ನ ಹೃದಯಸ್ಥನಾದ

ಮನ್ಮಥನು ಸುಟ್ಟುಹೋಗಿ 'ಅತನು' ಎನ್ನಿಸಿದ ಮೇಲೆ ತಾನು ಅವನೊಂದಿಗೆಯೇ ಇಲ್ಲವಾಗಬೇಕಾಗಿದ್ದಿತು. ಆದರೆ, ಹಾಗಾಗದೆ ತಾನಿಂದು 'ಅಕ್ಷತ'ಳಾಗಿರುವುದರಿಂದ, ತನ್ನ ಇನಿಯನ ಮಾತನ್ನು ಕಪಟವೆಂದು ಬಗೆಯಬೇಕಾಗಿದೆ. ಮದನನಿಲ್ಲದೆ ತಾನೊಬ್ಬಳೆ ಇರುವುದು ಅರ್ಥರಹಿತವಾಗಿ, ಅಸಮಂಜಸವಾಗಿ, ಅಚಿಂತ್ಯವಾಗಿ ಕಾಣುತ್ತಿದೆ ರತಿಗೆ.

ಈ ಸ್ಥಿತಿಯಲ್ಲಿ, ತಾನೊಬ್ಬಳೆ ಹಿಂದುಳಿಯುವುದು ಸರಿಯಲ್ಲ. ಪರಲೋಕ ಪ್ರಯಾಣವನ್ನು ಕೈಕೊಂಡ ಪತಿಯನ್ನು ತಾನು ಹಿಂಬಾಲಿಸುವುದಾಗಿ ಹೇಳುತ್ತಾಳೆ. ಪ್ರಾಣಿಗಳ ಸುಖವೆಲ್ಲ ಮನ್ಮಥನನ್ನೆ ಅವಲಂಬಿಸಿದ್ದರಿಂದ, ಮದನನ ಸಾವಿನಿಂದ ಪ್ರಪಂಚವೇ 'ದೈವವಂಚಿತ'ವಾಗಿದೆಯೆಂದು ಶೋಕಿಸುತ್ತಾಳೆ. ತಾನು ಮಾತ್ರವಲ್ಲ, ಜೀವಿಕೋಟಿಯೇ ವಿರಹವೇದನೆಯನ್ನು ಅನುಭವಿಸುತ್ತಿದೆಯೆಂದು ರತಿಯ ಸಂಕಟ.

ಅಬಲಾಜನರು ಕಾರ್ಗತ್ತಲೆಯಲ್ಲಿ ತಮ್ಮ ಪ್ರಿಯರ ಮನೆಗಳಿಗೆ ಹೋಗಲು ಅಳುಕುತ್ತಾರೆ. ಅಂಥ ವೇಳೆ ಅಭಿಸಾರಿಕೆಯರಿಗೆ ಮನ್ಮಥನೇ ನೆರವು. ಈಗ ಮನ್ಮಥನಿಲ್ಲದೆ ಅವರು ನಿಸ್ಸಹಾಯಕರಾಗಿದ್ದಾರೆ. ಪ್ರಮದೆಯರು ತಮ್ಮ ಪ್ರಣಯ ವಿಲಾಸಗಳಲ್ಲಿ ಮದ್ಯಸೇವನೆಯಿಂದ ಕೆಂಪಾದ ಕಣ್ಣುಗಳಿಂದಲೂ ತೊದಲು ನುಡಿಗಳಿಂದಲೂ ಶೋಭೆ ಪಡೆಯುತ್ತಿದ್ದರು. (ಮದ್ಯ ಸೇವನೆಗೆ ಮದನನ ಪ್ರಭಾವ ಕಳೆಗೊಡುತ್ತಿತ್ತು.) ಇಂದು ಮನ್ಮಥನಿಲ್ಲದೆ ಅವರ ಮದ್ಯದ ಮದ ಹಾಸ್ಯಾಸ್ಪದವಾಗಿ ಕಾಣುವುದು. ತನ್ನ ಪ್ರಿಯ ಬಂಧುವಾದ ಮದನನ ಸಾವಿನಿಂದ ಚಂದ್ರನು ದುಃಖಗೊಂಡಿದ್ದಾನೆ. ಕೃಷ್ಣಪಕ್ಷ ಕಳೆದು ಶುಕ್ಲಪಕ್ಷ ಬಂದರೂ ವೃದ್ಧಿಹೊಂದಲು ಅವನಿಗೆ ಇಷ್ಟವಿಲ್ಲ. ಪ್ರಿಯ ಸಖನ ದೇಹ ಳಿದಿರುವಾಗ ತಾನು ಮೈತುಂಬಿಕೊಳ್ಳುವುದೆ? ಚಂದ್ರನೀಗ ಹುಟ್ಟಿದರೂ ಹುಟ್ಟಿದ ಹಾಗಲ್ಲ; ಏಕೆಂದರೆ, ದುಃಖದಿಂದ ಕಾಂತಿಹೀನನಾಗಿದ್ದಾನೆ. ಮನ್ಮಥನ ಅವಸಾನದಿಂದ ಚೂತಕ್ಕೂ (ಮಾವಿಗೂ) ವಿರಹ ಸಂಭವಿಸಿದೆ. ಕೋಗಿಲೆಯ ದನಿಯಿಂದ, ಚಿಗುರಿನಿಂದ ಮೆರೆಯುವ ಅದರ ಹೂವು ಮನ್ಮಥನ ಪಂಚಬಾಣಗಳಲ್ಲಿ ಒಂದಾಗಿ ಮೆರೆಯುತ್ತಿತ್ತು. ಈಗ ಯಾರ ಬಾಣವಾಗಿ ಮೆರೆಯಲಾದೀತು? ದುಂಬಿಗಳ ಪಂಕ್ತಿ ಎಷ್ಟೋ ಸಲ ಮದನ ಚಾಪದ ಮೌರ್ವಿ (ಹೆದೆ) ಯಾಗಿದೆ. ಇಂದು ಅವು ದುಃಖಿತೆಯಾದ ರತಿಯಲ್ಲಿ ಸಹಾನುಭೂತಿ ತೋರುವಂತೆ ಕರುಣ ಸ್ವರದಲ್ಲಿ ಅಳುವಂತೆ ಝೇಂಕಾರ ಮಾಡುತ್ತಿವೆ.

ಇಂತು, ಮನ್ಮಥನ ಮರಣದಿಂದ ಜೀವಿಕೋಟಿಗೆ ಉಂಟಾಗಿರುವ ದುಃಖ ವನ್ನು ಬಿತ್ತರಿಸಿ, ಅವನು ಮತ್ತೆ ತನ್ನ ಸುಂದರ ದೇಹವನ್ನು ತಳೆದು ಬಂದು, ಸವಿ ಮಾತಿನಲ್ಲಿ ನಿಪುಣೆಯಾದ ಹೆಣ್ಣು ಕೋಗಿಲೆಯನ್ನು ಪ್ರೇಮದೂತಿಯನ್ನಾಗಿ ನಿಯೋಜಿಸೆಂದು ರತಿ ಕೋರುತ್ತಾಳೆ. ಮನ್ಮಥನೊಂದಿಗೆ ತಾನು ಅನುಭವಿಸಿದ. ಏಕಾಂತದ ಮಧುರ ದಾಂಪತ್ಯ ಸುಖವನ್ನು ಮತ್ತೆ ಮತ್ತೆ ನೆನೆದರೂ ಅದರಿಂದ ತನಗೆ ಶಾಂತಿ ದೊರೆಯದೆಂದು ಅವಳೀಗ ಖಿನ್ನಳು. ಅವನು ಅಂದು ಮಾಡಿ, ರತಿಯ ಅಂಗಗಳಿಗೆ ತೊಡಿಸಿದ ಹೂವಿನೊಡವೆಗಳು ಅವಳ ಮೈಮೇಲೆ ಇನ್ನೂ ಹಾಗೆಯೇ ಇವೆ; ಆದರೆ ಅವನ್ನು ಮಾಡಿದಾತನ ಸುಂದರ ದೇಹ ಮಾತ್ರ ಅವಳಿಗಿಂದು ಕಾಣಿಸದು; ಅವಳ ಹೂದೊಡವು ಅವನ ನೆನಪು ಕೊಡುತ್ತಿವೆ. ಮನ್ಮಥನು ರತಿಯ ಪಾದಗಳಿಗೆ ಲಾಕ್ಷಾರಸದಿಂದ ಮಾಡುತ್ತಿದ್ದ ಅಲಂಕರಣ ಕಾರ್ಯ ಅರ್ಧಕ್ಕೇ ನಿಂತುಹೋಗಿತ್ತು. ಮನ್ಮಥನ ನೆನಪು ಕೊಡುವ ಮತ್ತೊಂದು ಕ್ರೂರ ಸಂಗತಿ! ಆ ದೇವತೆಗಳಾದರೂ ಎಂಥ ಕ್ರೂರರು! ಆ ಅಲಂಕರಣ ಮುಗಿವ ಮೊದಲೆ ಮದನನನ್ನು ನೆನೆದು ಕರೆದೊಯ್ದರು. ದೇವತೆಗಳ ನೆನಪಾದ ಕೂಡಲೆ ರತಿಗೆ ಸುರ ಸ್ತ್ರೀಯರ ನೆನಪಾಗುತ್ತದೆ. ಮನ್ಮಥನು ಅವರ ಮೋಹ ಪಾಶಕ್ಕೆ ಬೀಳುವ ಮೊದಲೆ ತಾನು ಅಗ್ನಿಗೆ ಬಿದ್ದು ಅವನ ತೊಡೆಯೇರುವುದಾಗಿ ನಿಶ್ಚಯಿಸುತ್ತಾಳೆ. ಈ ನಿಶ್ಚಯ ಅವಳಿಗೆ ಸರಿದೋರುತ್ತದೆ. ಏಕೆಂದರೆ, ತಾನು ಪತಿಯನ್ನು ಹಿಂಬಾಲಿಸಿಯೂ ಕ್ಷಣಮಾತ್ರವೇ ಆದರೂ ಪತಿಯಿಂದ ಅಗಲಿ ಬದುಕಿರುತ್ತಿದ್ದಳೆಂಬ ನಿಂದೆ ನಿಲ್ಲುವುದೆಂದು ಅವಳ ಶಂಕೆ. ಈ ಭಾವನೆಯಲ್ಲಿ ರತಿಯ ಪಾತಿವ್ರತ್ಯ ಪರಾಕಾಷ್ಠೆಯನ್ನು ಮುಟ್ಟಿದೆ. ಮದನ ಸತ್ತ; ಅವನ ದೇಹವಾದರೂ ಇದೆಯೆ? ಶವಕ್ಕೆ ಮಾಡಬೇಕಾದ ಕಡೆಯ ಅಲಂಕಾರ ಮಾಡಲೂ ಅವಕಾಶವಿಲ್ಲವಲ್ಲಾ, ಎಂದು ರತಿ ಶೋಕಿಸುತ್ತಾಳೆ.

ಮನ್ಮಥನ ಜೀವವೂ ಇಲ್ಲ, ತನುವೂ ಇಲ್ಲ. ಎರಡೂ ಏಕಕಾಲದಲ್ಲಿ 'ಅತಾರ್ಕಿಕ ಗತಿ'ಯನ್ನು ಹೊಂದಿವೆ. ಆದ್ದರಿಂದ, ಇಂದು ಅವಳ ಹೃದಯ, ಮನಸ್ಸು, ಬದುಕು–ಎಲ್ಲವೂ ತೆರವು; ಸರ್ವ ಶೂನ್ಯ. ಆದರೆ, ತಟ್ಟನೆ, ಕತ್ತಲೆ ಯನ್ನು ಕೋಲ್ಮಿಂಚು ಬೆಳಗುವಂತೆ, ಅವಳ ದಾಂಪತ್ಯದ ಸವಿನೆನಪಿನ ಸುಂದರ ಚಿತ್ರವೊಂದು ಸುಳಿದು, ಅವಳ ಬಗೆ ಬದುಕುಗಳ ತೆರವನ್ನು ತುಂಬುತ್ತದೆ–ಕ್ಷಣ ಕಾಲ; ಮಧುರ ತಾನವೊಂದು ಮಿಡಿದು ಅವಳ ದುಃಖಗೀತವನ್ನು ರಂಜಿಸುತ್ತದೆ.

ಮದನನು ಅದೆಷ್ಟೋ ಸಲ ತನ್ನ ನೆಚ್ಚಿನ ಗೆಳೆಯ ವಸಂತನೊಂದಿಗೆ ಸರಸ

ಸಲ್ಲಾಪದಲ್ಲಿ ಕಾಲಕಳೆಯುತ್ತಿದ್ದನು. ರತಿಯಂತೂ ಅವನ ಜೀವನದ ಸಂಗಾತಿ. ಮನ್ಮಥ ಎಲ್ಲಿದ್ದರಲ್ಲಿ ರತಿ—ಕುಳಿತಿರಲಿ, ನಿಂತಿರಲಿ, ಕಾರ್ಯನಿರತನಾಗಿರಲಿ, ಯುದ್ಧೋನ್ಮುಖನಾಗಿರಲಿ. ಒಮ್ಮೆ, ಮನ್ಮಥ ತೊಡೆಯ ಮೇಲೆ ಬಿಲ್ಲನ್ನಿಟ್ಟು ಕೊಂಡು ಬಾಣವನ್ನು ನೇರಗೊಳಿಸುತ್ತಿದ್ದನು. ಮನ್ಮಥನೂ ಪ್ರೇಮಯೋಧನಷ್ಟೆ. ಯೋಧನು ಯಾವಾಗಲೂ ತನ್ನ ಆಯುಧವನ್ನು ಸಜ್ಜಾಗಿಟ್ಟಿರಬೇಕೆಂಬುದನ್ನು ಅವನು ಬಲ್ಲ. ಬಾಣವನ್ನು ಸರಿಪಡಿಸುತ್ತಲೇ ನಗೆ ಬೆರಸಿ ವಸಂತನೊಂದಿಗೆ ಸ್ನೇಹ ಸಲ್ಲಾಪವಾಡುತ್ತಿದ್ದನು. ಬಳಿಯಲ್ಲಿಯೆ ರತಿಯೂ ಇದ್ದಳು. ಕೈಯಲ್ಲಿ ಕೆಲಸ; ಗೆಳೆಯನೊಂದಿಗೆ ಮಾತು; ಕಡೆಗಣ್ಣ ನೋಟ ಮಾತ್ರ ರತಿಯ ಕಡೆಗೆ! ಆ ಕಡೆಗಣ್ ನೋಟದಲ್ಲಿ ಮಡದಿಯ ಮೇಲಣ ಮಮತೆ ಅದೆಷ್ಟು ತುಂಬಿರಬೇಡ! ಅಂತೆಯೇ ಈ ಮಧುರ ಸನ್ನಿವೇಶದ ಸವಿನೆನಪು ರತಿಯ ಬಗೆವೊಲದಲ್ಲಿ ಹಚ್ಚಹಸುರಾಗಿದೆ.

ಮಾನವ ಮನೋಧರ್ಮ ಪಂಡಿತನಲ್ಲವೆ ಕಾಳಿದಾಸ! ಮೇಲ್ಕಂಡ ನೆನಪಿನ ಚಿತ್ರದ ವ್ಯಕ್ತಿಗಳಲ್ಲಿ ಒಬ್ಬನಾದ ವಸಂತನನ್ನು ನೆನೆದ ಕೂಡಲೆ ರತಿಯ ಮನಸ್ಸು ನೆನಪಿನ ಲೋಕದಿಂದ ಸದ್ಯಃಪ್ರಪಂಚಕ್ಕೆ ಮರಳಿ, ಪತಿಯ ನೆಚ್ಚಿನ ಗೆಳೆಯನನ್ನು ನೆನೆಯುತ್ತದೆ; ಅವನ ಮಂಗಳದ ಬಗೆಗೆ ತಲ್ಲಣಿಸುತ್ತದೆ. 'ತಾನು–ತನ್ನ ಪತಿ' ಎಂಬ ಸ್ವಾರ್ಥ ಸಂಕುಚಿತ ಪ್ರಪಂಚಕ್ಕೆ ಸೇರಿದವಳಲ್ಲ ರತಿ. ಮೇಲಾಗಿ, ಮಾಧವನು ಇಬ್ಬರಿಗೂ ಹೃದಯಂಗಮನು; ಮನ್ಮಥನ ಬಿಲ್ಲನ್ನು ಹೂಗಳಿಂದ ಅಣಿಗೈವ ಸಖ. ಅವನೂ ತನ್ನ ಸ್ನೇಹಿತನಂತೆಯೆ ಶೂಲಧರನ ಉಗ್ರರೋಷಕ್ಕೆ ಆಹುತಿಯಾಗಿಲ್ಲ ತಾನೆ? ಇದೇ ಅವಳ ಮನಸ್ಸನ್ನು ಕಾಡತೊಡಗಿದ ಪ್ರಶ್ನೆ.

ಕಾಳಿದಾಸನೂ ಬಲ್ಲನು: ಎಷ್ಟೇ ಕರುಣರಸ ಭೂಯಿಷ್ಠವಾಗಿದ್ದರೂ ರತಿಯ ರೋದನ ನಿಲುಗಡೆಯಿಲ್ಲದ ಏಕಾಂತ ರೋದನವಾಗಿ ನಡೆದರೆ ಬೇಸರ ತರಬಹುದೆಂದು. ಅಂತೆಯೇ, ಅವಳ ದುಃಖದಲ್ಲಿ ಸಹ ಭಾಗಿಯಾಗಲು ವಸಂತನು ಪ್ರವೇಶಿಸುವಂತೆ ಮಾಡುತ್ತಾನೆ. ಈ ಕೆಲಸವನ್ನು ಎಷ್ಟು ಕುಶಲತೆ ಯಿಂದ ಮಾಡುತ್ತಾನೆ ಕವಿ!

ರತಿ ರೋದಿಸುತ್ತಿದ್ದಾಗ ಅವನು ದೂರದಲ್ಲಿ ನಿಂತಿದ್ದಾನೆ. ಆದರೆ, ಅವನ ಹೃದಯ ಕಲ್ಲಿನದೇನಲ್ಲ. ಅವಳ ರೋದನದಿಂದ ಸಾಕಷ್ಟು ನೊಂದಿದೆ. ಅವಳ ದುಃಖದ ಆವೇಗ ಕಡಮೆಯಾಗಲೆಂದು ಅವನೂ ಕಾಯುತ್ತಿದ್ದಿರಬೇಕು. ಸಂತೈಸಲು ಬರಲಾರ, ಬರದಿರಲೂ ಆರ. ಆದರೆ, ರತಿ ಅಂತಃಕರಣಪೂರ್ವಕ

ತನ್ನನ್ನು ನೆನೆದಾಗಲೂ ತಾನೂ ಕೇಳದಂತಿರುವುದೆ? ಆಗಲೀಗ ಅವನು ಅವಳನ್ನು ಸಂತವಿಡಲೆಂದು ಅವಳೆದುರು ಕಾಣಿಸಿಕೊಂಡನು.

ಆಗ ಅವಳ ದುಃಖ ಇಮ್ಮಡಿಸಿತು. ಮಾಧವನಿಗೆ ಅವನ ಗೆಳೆಯನದಾಗಿ ಉಳಿದಿದ್ದ ಬೂದಿಯ ರಾಶಿಯನ್ನು ತೋರಿ, ತನ್ನ ಹೃದಯದ ಅಳಲನ್ನು ಮತ್ತೆ ತೋಡಿಕೊಳ್ಳ ತೊಡಗಿದಳು. ಅವಳ ದುಃಖ ಪ್ರಪಂಚದಲ್ಲಿ ಈಗ ವಸಂತನಿಗೂ ಪ್ರಮುಖಸ್ಥಾನವುಂಟು.

ತನಗಾಗಿ ಅಲ್ಲದಿದ್ದರೆ, ದರ್ಶನೋತ್ಸುಕನಾದ ಮಾಧವನಿಗಾಗಿಯಾದರೂ ತನ್ನ ಪತಿ ದರ್ಶನಕೊಡಬೇಕೆಂದು ರತಿ ಹಂಬಲಿಸುವಳು. ವಸಂತನು ಅಲಕ್ಷ್ಯಕ್ಕೆ ಅರ್ಹನಲ್ಲ, ಅವನು ಮನ್ಮಥನ ಒಡನಾಡಿ; ಮನ್ಮಥನಿಗೆ ಹೂವಿನ ಬಾಣವನ್ನೂ, ತಾವರೆದಂಟಿನ ನಾರಿನ ಬಿಲ್ಲ ಹೆದೆಯನ್ನೂ ಒದಗಿಸಿ, ಸಮಸ್ತ ಲೋಕವನ್ನೂ ಮನ್ಮಥನ ಬಿಲ್ಲಿನ ಪ್ರಭಾವಕ್ಕೆ ಒಳಪಡಿಸಿರತಕ್ಕ ಸಮರ್ಥನು.

ಈ ರೀತಿ ಮನ್ಮಥನಲ್ಲಿ ಮೊರೆಯಿಟ್ಟು, ರತಿ ವಸಂತನನ್ನು ಸಂಬೋಧಿಸಿ, ದುಃಖಿಸತೊಡಗುವಳು:

ವಸಂತನ ಗೆಳೆಯನು ಗಾಳಿಯ ಹೊಡೆತಕ್ಕೆ ಸಿಕ್ಕಿದ ದೀಪದಂತೆ ನಂದಿ ಹೋಗಿದ್ದಾನೆ; ಮರಳಿ ಬಾರನು. ತಾನು ಮಾತ್ರ ದುಃಖವೆಂಬ ಹೊಗೆಯನ್ನು ಸೂಸುತ್ತ ಆ ದೀಪದ ಬತ್ತಿಯಂತೆ ಉಳಿದುಕೊಂಡಿರುವಳು. (ತನ್ನ ಜೀವನಕ್ಕೆ ಮನ್ಮಥನು ಬೆಳಕಾಗಿದ್ದನು ಎಂದು ಅವಳ ಭಾವನೆ.) ತನ್ನನ್ನು ಉಳಿಸಿ ಮದನನನ್ನು ಮಾತ್ರ ಕೊಂಡೊಯ್ದು ವಿಧಿ ಎಸಗಿರುವ ಕ್ರೂರ ಕಾರ್ಯ ಅರ್ಧಾಂತಕವಾಗಿದೆಯೆಂದು ರತಿ ಹೇಳುವಳು. ಹೇಗೆ ವಿಚಾರ ಮಾಡಿದರೂ ತಾನು ಹಿಂದೆ ಉಳಿದಿರುವುದು ಸಲ್ಲದೆಂದು ಹೇಳಿ, ಪತಿ ವಿರಹತೆಯಾದ ತನ್ನನ್ನೂ ಅಗ್ನಿಗೆ ಒಪ್ಪಿಸಿ ಪತಿಯ ಸಮೀಪಕ್ಕೆ ಸೇರಿಸಬೇಕೆಂದು ವಸಂತನನ್ನು ಬೇಡಿಕೊಳ್ಳುತ್ತಾಳೆ. ಬೆಳುದಿಂಗಳು ಚಂದ್ರನನ್ನೇ ಹಿಂಬಾಲಿಸುವುದು, ಮೊದಲಾದ ಅಚೇತನ ಪ್ರಪಂಚದ ದೃಷ್ಟಾಂತಗಳನ್ನು ಕೊಟ್ಟು, ತಾನಾದರೂ ಪತಿಯನ್ನು ಹಿಂಬಾಲಿಸಬೇಕಾದ್ದು ಕರ್ತವ್ಯವೆಂದು ವಸಂತನಿಗೆ ಸ್ಪಷ್ಟಪಡಿಸುತ್ತಾಳೆ. ರತಿಯಂಥ ಕೋಮಲೆ ಅಗ್ನಿಗೆ ಆಹುತಿಯಾಗುವುದು ಸುಲಭವೇ, ತರವೆ ಎಂದು ವಸಂತ ಶಂಕಿಸಬಹುದು. ಅದಕ್ಕೆ ರತಿಯ ಉತ್ತರ ಸಿದ್ಧವಾಗಿದೆ: ಪ್ರಿಯನ ದೇಹದ ಭಸ್ಮದಿಂದಲೇ ರಂಜಿತವಾದ ತನ್ನ ಶರೀರವನ್ನು ಚಿಗುರಿನ ಹಾಸಿಗೆಯಲ್ಲಿ ಹೇಗೋ ಹಾಗೆ ಅಗ್ನಿಯಲ್ಲಿ ಇರಿಸಲು ಅವಳು ಸಿದ್ಧ. ಹಿಂದೆ ಹೂವಿನ ಹಾಸಿಗೆಯನ್ನು

ರತಿ ಮನ್ಮಥರಿಗೆ ವಸಂತನೇ ಸಿದ್ಧಪಡಿಸಿಕೊಡುತ್ತಿದ್ದನಲ್ಲವೇ ? (ಎಂಥ ನೆಚ್ಚಿನ ಗೆಳೆಯ !) (ಈಗ ಮನ್ಮಥ ಮಲಗಿದ್ದುದು ಬೆಂಕಿಯ ಹಾಸಿನ ಮೇಲೆ. ಅವನ ಹಾಸಿಗೆಯಲ್ಲಿ ಪಾಲುಗೊಳ್ಳಬೇಕಾದ್ದು ಪತಿವ್ರತೆಯಾದ ತನ್ನ ಕರ್ತವ್ಯ.) ಆದ್ದರಿಂದ, ತನಗಾಗಿ ಬೇಗನೆ ಚಿತೆಯನ್ನು ಸಿದ್ಧಪಡಿಸಬೇಕೆಂದು ವಸಂತನನ್ನು ಬೇಡಿಕೊಳ್ಳುತ್ತಾಳೆ. ಅಷ್ಟೇ ಅಲ್ಲ; ಅವಳಿಗಿಟ್ಟ ಬೆಂಕಿಯನ್ನು ಅವನು ತೆಂಗಾಳಿಯಿಂದ ಬೀಸಿ ತ್ವರೆಗೊಳಿಸಬೇಕು. ಏಕೆಂದರೆ, ಅವಳನ್ನು ಬಿಟ್ಟು ಮನ್ಮಥನು ಒಂದು ಕ್ಷಣವೂ ಸಂತಸದಿಂದ ಇರಲಾರನು. ಅಲ್ಲದೆ ರತಿಮನ್ಮಥರಿಬ್ಬರಿಗೂ ಒಟ್ಟಿಗೆ ಒಂದೇ ಬೊಗಸೆಯಲ್ಲಿ ವಸಂತನು ಜಲತರ್ಪಣವನ್ನೀಯಬೇಕು; ಪರಲೋಕದಲ್ಲಿ ಅದನ್ನು ಮನ್ಮಥನು ಅವಳೊಂದಿಗೆ ಕುಡಿಯುವನು. ಈ ಪರಲೋಕವಿಧಿಯಲ್ಲಿ, ಮಾಧವನು ತನ್ನ ಗೆಳೆಯನಿಗೆ ಮಾವಿನ ಚಿಗುರಿನ ಹೂಗೊಂಚಲನ್ನು ಅರ್ಪಿಸಬೇಕು; ಅದನ್ನು ಕಂಡರೆ ಅವನಿಗೆ ಅಷ್ಟು ಪ್ರೀತಿ.

ರತಿಯ ಈ ಕರುಳುಕೊಯ್ಯುವ ಕೋರಿಕೆಗೆ ಮಾಧವ ಏನು ಉತ್ತರ ಕೊಟ್ಟಾನು ? ಚಿತಾಪ್ರವೇಶವು ಅವಳ ಪಾತಿವ್ರತ್ಯದ ಘನತೆಯನ್ನು ಲೋಕ ಸಾರುವುದಾದರೂ, ಯಾವ ಕೈಯಲ್ಲಿ ಅವನು ಅವಳಿಗೆ ಕೆಂಡದ ಹಾಸಿಗೆ ಹಾಸಿ ಕೊಟ್ಟಾನು ?

ರತಿ ಇಂತು ಅಗ್ನಿಗೆ ತನ್ನ ಒಡಲನ್ನು ಅರ್ಪಿಸಬೇಕೆಂದು ನಿಶ್ಚಯ ಮಾಡಿದಾಗ, ಆಕಾಶವಾಣಿಯೊಂದು ಕೇಳಿಬಂದು ಅವಳಿಗೆ ಮಾತ್ರ ಕರುಣಿಸಲಿಲ್ಲ, ವಸಂತನಿಗೂ ಕರುಣೆ ತೋರಿತು. ಏಕೆಂದರೆ, ವಸಂತನ ಪಾಲಿಗೆ ಬಂದಿದ್ದ ಕ್ರೂರ ಕಾರ್ಯವನ್ನು ಅವನು ಮಾಡದಂತೆ ಮಾಡಿತು. ಹರನು ಪಾರ್ವತಿಯ ಕೈಹಿಡಿದಂದು ರತಿ ತನ್ನ ಪತಿಯನ್ನು ಪಡೆಯುವಳೆಂದೂ, ಆದ್ದರಿಂದ ಅಲ್ಲಿಯವರೆಗೆ ಮದನನ ಕಳೇಬರವನ್ನು ಅವಳು ಕಾಪಾಡಿಕೊಳ್ಳಬೇಕೆಂದೂ ಆಕಾಶವಾಣಿ ನುಡಿದು, ರತಿಯ ಮರಣ ಪ್ರಯತ್ನದ ಇಚ್ಛೆಯನ್ನು ಕುಗ್ಗಿಸಿತು. ಆಗ, ಈ ಆಕಾಶವಾಣಿಯಲ್ಲಿ ನಂಬಿಕೆಯಿಟ್ಟು ವಸಂತನು ರತಿಯನ್ನು ಸಮಾಧಾನಪಡಿಸತೊಡಗಿದನು. ವ್ಯಸನಕೃಶೆಯಾದ ಅನಂಗನ ಮಡದಿ ತನ್ನ ದುಃಖ ಕೊನೆಗೊಳ್ಳುವ ಆ ಸುದಿನವನ್ನು ಹಾರೈಸುತ್ತಿದ್ದಳು.

ರತಿ ವಿಲಾಪ ವ್ಯರ್ಥವಾಗಲಿಲ್ಲ; ಅವಳ ಮೊರೆ ದೈವದ ಕಿವಿ ಮುಟ್ಟಿತು; ಅವಳ ಪಾತಿವ್ರತ್ಯ ದೈವದ ಕರುಣೆಯನ್ನು ಉಕ್ಕಿಸಿತು.

## ಫಲಸಿದ್ಧಿಯ ಪವಿತ್ರ ಸನ್ನಿವೇಶ

'ಕುಮಾರಸಂಭವ'ದಲ್ಲಿ ಶೃಂಗಾರ ರಸಘಟ್ಟಿಯಿಂದ ನಿರ್ಮಿತವಾದ ಸ್ವರ್ಣ ಮೂರ್ತಿಯೆಂದರೆ ಗಿರಿಜೆಯೆ. ಮೂರನೆಯ ಸರ್ಗದಲ್ಲಿ ನಾವು ಕಾಣುವುದು, ತನ್ನ ಸೌಂದರ್ಯ ಪುಷ್ಪದಿಂದ ಆರಾಧಿಸಿ ಪ್ರಿಯನನ್ನು ಒಲಿಸಿಕೊಳ್ಳಹೊರಟು, ಭಗ್ನ ಮನೋರಥಳಾದ ಕಾಮಿನಿಯನ್ನು; ಐದನೆಯ ಸರ್ಗದಲ್ಲಿ, ತನ್ನ ಚೆಲುವನ್ನು ಗಾಳಿಗೆ ತೂರಿ, ತಪಸ್ಸಿನ ಮೂಲಕ ಪತಿಯನ್ನು ಪಡೆಯಲು ಉಜ್ಜುಗಿಸಿ, ಸಿದ್ಧಿಯನ್ನು ಪಡೆದ ಪ್ರೇಮಯೋಗಿನಿಯನ್ನು.

ಐದನೆಯ ಸರ್ಗದ ಮೊದಲ ಭಾಗವೆಲ್ಲ ಈ ಪ್ರೇಮಯೋಗಿನಿಯ, ವಿರಾಗಿಣಿಯ, ಘೋರವಾದ ತಪಸ್ಸಿನ ವರ್ಣನೆಗೆ ಮೀಸಲಾಗಿದೆ; ಮಧ್ಯಭಾಗದಲ್ಲಿ, ಆ ತಪಸ್ಸಿನ ಫಲದ ಉದಯವನ್ನೂ,ಅಂತ್ಯಭಾಗದಲ್ಲಿ ಫಲಸಿದ್ಧಿಯನ್ನೂಕಾಣಬಹುದು.

ಮೊದಲಭಾಗ ವರ್ಣನಾತ್ಮಕ; ತಪಸ್ಸಿನ ಫಲಪ್ರಾಪ್ತಿಯ ಭಾಗವು ಪಾತ್ರ ಸ್ವಭಾವೋನ್ಮೀಲನದಿಂದಲೂ, ಸ್ವಾರಸ್ಯವಾದ ಸಂವಾದಗಳಿಂದಲೂ, ರಸ ಪರಿಪೂರ್ಣತೆಯಿಂದಲೂ ಕೂಡಿದ್ದು ನಾಟಕೀಯ ಗುಣದಿಂದ ಶೋಭೆಪಡೆದಿದೆ.

ಈ ಭಾಗದಲ್ಲಿ, ಮತ್ತೆ ಎರಡು ಒಳವಿಭಾಗಗಳನ್ನು ಕಾಣಬಹುದು: ಒಂದು, ವಟುವೇಷದ ಶಿವನಿಗೂ ಪಾರ್ವತಿಯ ಸಖಿಗೂ ನಡೆಯುವ ಸಂಭಾಷಣೆ; ಇನ್ನೊಂದು, ಶಿವನಿಗೂ ಪಾರ್ವತಿಗೂ ನಡೆಯುವ ಸಂವಾದ. ಮೊದಲ ವಿಭಾಗ ದಲ್ಲಿ, ವಿಪ್ರಲಂಭ ಶೃಂಗಾರದ ಸೊಗಸಾದ ಚಿತ್ರಣವಿದೆ; ಎರಡನೆಯದರಲ್ಲಿ, ಸಂವಾದದ ಚಾತುರ್ಯಕ್ಕೆ ತುಸ ಹಾಸ್ಯದ ಮೆರುಗು ಕಳೆಗೊಟ್ಟಿದೆ.

ಮೊದಲ ತಪಸ್ಸಿನ ವರ್ಣನೆಯಾಗಲಿ, ತರುವಾಯದ ಗಿರಿಜೆಯ ವಿರಹ ಶೃಂಗಾರದ ಬಿತ್ತರಣೆಯಲ್ಲಾಗಲಿ ಕಡೆಯಲ್ಲಿನ ಶಿವ-ಪಾರ್ವತಿಯರ ಸಮಾಗಮ ದಲ್ಲಿಯಾಗಲಿ ಸಾತ್ತ್ವಿಕ ಪ್ರೇಮದ ಪವಿತ್ರ ಪ್ರಭೆ ಎಲ್ಲೆಲ್ಲೂ ತನ್ನ ಹೊಂಗಿರಣ ಗಳನ್ನು ಹರಡಿದೆ; ಕಾಮನ ರಾಗಪ್ರಪಂಚದ ಕೆಂಗಿರಣದ ಸುಳಿವೂ ಇಲ್ಲ. ಕಾಮ ಸುಟ್ಟು, ಪ್ರೇಮದ ಆವಿರ್ಭಾವವಾಗಿದೆ. ಫಲಸಿದ್ಧಿಯ ಪವಿತ್ರ ಸನ್ನಿವೇಶ ರಮಣೀಯವೂ ಆಗಿದೆ.

ಪಾರ್ವತಿಯಿದ್ದ ತಪೋವನಕ್ಕೆ ಬ್ರಹ್ಮಚಾರಿಯ ವೇಷದ ಶಿವನು ಬರುವನಷ್ಟೆ. ಅವನು ಶಿವನೆಂಬ ಸಂಗತಿ ವಾಚಕರಿಗೆಂತೋ ಅಂತೆ ಪಾರ್ವತಿಗೂ ಅವಳ ಸಖಿಗೂ ತಿಳಿದುಬರುವುದು ಕಡೆಯಲ್ಲಿಯೆ. ಈ ಒಂದು ಅಂಶ, ಸನ್ನಿವೇಶದ ನಾಟಕೀಯ ಕೌತುಕವನ್ನು ಕಾಯ್ದಿಡಲು ಸಹಕಾರಿಯಾಗಿದೆ. ಈ ವಟುವಿನ

ಪ್ರವೇಶ, ಆತನ ಪರಿಚಯವನ್ನು ಹೊರಪಡಿಸದಿರುವುದರಿಂದ ಸ್ವಾರಸ್ಯವಾದ ಸಂವಾದ-ವಾಗ್ವಾದಗಳಿಗೆ ಕಲ್ಪಿತವಾಗಿರುವ ಅವಕಾಶ, ಕಡೆಯಲ್ಲಿ ಹರನ ಅನಿರೀಕ್ಷಿತ ನಿಜರೂಪ ಪ್ರದರ್ಶನ—ಇವೆಲ್ಲ ಈ ಸನ್ನಿವೇಶದ ನಾಟಕೀಯ ಅಂಶಗಳು.

ಮೊದಲು, ವಟುವಿಗೂ ಪಾರ್ವತಿಯ ಸಖಿಗೂ ಬಳಿಕ ಪಾರ್ವತಿಗೂ ವಟುವಿಗೂ ನಡೆಯುವ ಸಂಭಾಷಣಗಳ ಸ್ವಾರಸ್ಯವನ್ನು ಪರಿಶೀಲಿಸೋಣ.

## ಕಪಟ ವಟುವಿನ ಕೆಣಕು ನುಡಿ

ಸೌಂದರ್ಯದಿಂದ ಪಡೆಯಲಾಗದ ತನ್ನ ಮನೋರಥ ಫಲವನ್ನು ತಪಸ್ಸಿನ ಮೂಲಕ ಪಡೆಯಲು ನಿರ್ಧರಿಸಿ, ಪಾರ್ವತಿ ಉಗ್ರ ತಪಸ್ಸನ್ನು ಕೈಕೊಂಡಳಷ್ಟೆ. ಅವಳ ತಪಸ್ಸು ಕಠಿನ ದೇಹಿಗಳೆನಿಸಿದ ತಪಸ್ವಿಗಳ ತಪಸ್ಸನ್ನೂ ಹಿಂದಿಕ್ಕಿ ನಿರಂತರ ವಾಗಿ ಸಾಗಿತು. ಹೀಗಿರಲು, ಒಮ್ಮೆ ತೇಜೋಮೂರ್ತಿಯಾದ ತರುಣ ಬ್ರಹ್ಮಚಾರಿಯೊಬ್ಬನು ಅವಳ ತಪೋವನವನ್ನು ಪ್ರವೇಶಿಸಿದನು. ಅತಿಥಿಸತ್ಕಾರ ಪರಳಾದ ಪಾರ್ವತಿ ಅವನನ್ನು ಉಪಚರಿಸಲು ಇದಿರೆದ್ದು ನಡೆದಳು.

ಶಿವನು ಎಷ್ಟೇ ಆಗಲಿ, ನಟರಾಜನಲ್ಲವೆ, ಅಭಿನಯ ಪಟುವಲ್ಲವೆ! ಅವನ ವಟುವೇಷದ ಅಭಿನಯ ಅತ್ಯಂತ ಮನೋಜ್ಞವಾಗಿದೆ; ಮಾತಿನ ಚತುರತೆ ಮನಸೂರೆಗೊಳ್ಳುವಂತಿದೆ.

ಸತ್ಕಾರವನ್ನು ಪಡೆದ ವಟು, ಇಲ್ಲದ ಆಯಾಸವನ್ನು ನಟಿಸಿ, ಅದನ್ನು ನಿವಾರಿಸಿಕೊಂಡನಂತೆ! ಬಳಿಕ, ಸ್ವಲ್ಪವೂ ಕಾಮನೆಯ ಸುಳಿವಿಲ್ಲದ ನೋಟದಿಂದ ಉಮೆಯನ್ನು ನೋಡುತ್ತ, ಅವಳ ತಪಶ್ಚರ್ಯೆಯ ಜೀವನದಲ್ಲಿ ಆಸಕ್ತಿಯನ್ನು ತೋರುವ ಪ್ರಶ್ನೆಗಳನ್ನು ಹಾಕತೊಡಗಿದನು.

ಸಮಿತ್ತು, ದರ್ಭೆ, ಸ್ನಾನಕ್ಕೆ ಒಳ್ಳೆಯ ನೀರು ಸುಲಭವಾಗಿ ದೊರಕುವುದೆ ? 'ಶರೀರಮಾದ್ಯಂ ಖಲು ಧರ್ಮಸಾಧನಂ': ಆದ್ದರಿಂದ, ಯಥಾಶಕ್ತಿಯಾಗಿ ತಾನೇ ತಪಸ್ಸು ನಡೆಯುತ್ತಿರುವುದು ?–'ನಿನ್ನ ಶರೀರ ಕೋಮಲ; ಮಿತಿಮೀರಿದ ತಪಸ್ಸನ್ನು ತಡೆಯದು' ಎಂದು ಈ ಪ್ರಶ್ನೆಯ ಒಳ ಅರ್ಥ (ಧ್ವನಿ). ತನ್ನ ಮುಂದಿನ ಪ್ರಶ್ನೆಗಳಲ್ಲಿ, ಉಮೆಯ ಚೆಂದುಟಿಯನ್ನೂ ಚಂಚಲ ನೇತ್ರಗಳನ್ನೂ ಕುರಿತ ಪ್ರಶಂಸೆಯನ್ನು ವಟು ಕುಶಲತೆಯಿಂದ ಹುದುಗಿಸಿದ್ದಾನೆ. (ವಟುವಿನ ಕುಶಲತೆ ಎಂದರೆ ಕಾಳಿದಾಸನ ಕುಶಲತೆ ತಾನೆ!) ಸರಳ ಸುಂದರವಾದ, ಧ್ವನಿ ಪೂರ್ಣವಾದ ಈ ಪ್ರಶ್ನೆಗಳನ್ನು ಗಮನಿಸಿ: 'ನಿನ್ನ ತುಟಿಗೆ ಎಣೆಯೆನಿಸುವ,

ನೀನೇ ಬೆಳಸಿದ ಬಳ್ಳಿಗಳ ಕೆಂಪಾದ ಚಿಗುರು ದಿನ ದಿನಕ್ಕೆ ಚೆನ್ನಾಗಿ ಬೆಳೆಯುತ್ತಿವೆಯೆ?' 'ಹೇ ಉತ್ಪಲಾಕ್ಷಿ, ನಿನ್ನ ಕಣ್ಣ ಹೋಲಿಕೆ ಪಡೆದಿರುವ ಚಂಚಲ ಲೋಚನಗಳುಳ್ಳ ಜಿಂಕೆಗಳು ನಿನ್ನ ಕೈಯ ದರ್ಭೆಯನ್ನು ಸಲಿಗೆಯಿಂದ ಆಪಹರಿಸಿಕೊಂಡುಹೋಗುತ್ತವೆಯಲ್ಲಾ, ಅವುಗಳಲ್ಲಿ ನೀನು ಪ್ರಸನ್ನಳಾಗಿರುವೆಯಷ್ಟೆ?'

'ಪಾಪವೃತ್ತಯೇ ನ ರೂಪಂ' (ಸೌಂದರ್ಯವು ಪಾಪದಲ್ಲಿ ತೊಡಗದು) ಎಂದು ಒಂದು ವಾಕ್ಯದಲ್ಲಿ ವಟುವೇಷಧಾರಿಯಾದ ಶಿವನು ಉಮೆಯ ರೂಪನ್ನೂ, ಶೀಲವನ್ನೂ ಪ್ರಶಂಸಿಸಿ, ಅವಳ ತಪಸ್ಸಿನ ಬಗೆಗೆ ಮೆಚ್ಚಿಕೊಳ್ಳುವನು. ಯಾರನ್ನು ಮೊದಲು 'ಉತ್ಪಲಾಕ್ಷಿ' ಎಂದು ಸಂಬೋಧಿಸಿದನೋ ಅವಳನ್ನು ಈಗ 'ಉದಾರ ದರ್ಶನೇ' ಎಂದು ಕರೆಯುವನು. ವಿಶಾಲಾಕ್ಷಿಯೂ ಆಗಬಹುದು, ವಿಸ್ತಾರ ಜ್ಞಾನ (ದರ್ಶನ) ಸಂಪನ್ನೆಯೂ ಆಗಬಹುದು. ಗಿರಿಜೆಯ ತಪಸ್ಸು ಮುನಿಗಳಿಗೂ ಆದರ್ಶಪ್ರಾಯವಾಯಿತಂತೆ. ಇಷ್ಟೇ ಅಲ್ಲ: ಸಪ್ತರ್ಷಿಗಳ ಪೂಜೆಯಿಂದ ಪವಿತ್ರತರಳಾದ ಗಂಗೆಯಿಂದಲೂ ಆಗದಷ್ಟು ಉಮೆಯ ನಿರ್ಮಲ ಚರಿತೆಯಿಂದ ಅವಳ ತಂದೆಯಾದ ಹಿಮವಂತ ಪರಿಶುದ್ಧನಾಗಿರುವನೆಂದು ವಟುವಿನ ಪ್ರಶಂಸೆ. ಈ ಪಾರ್ವತಿಯು ಅರ್ಥ ಕಾಮಗಳನ್ನು ತನ್ನ ಮನಸ್ಸಿನಿಂದ ತೊಡೆದು ಹಾಕಿ ಧರ್ಮವೊಂದನ್ನೇ ಅವಲಂಬಿಸಿರುವುದರಿಂದ, ಈ ವರ್ಗಮೂರರಲ್ಲಿ ಧರ್ಮವೇ ಶ್ರೇಷ್ಠವೆಂದು ತನಗೆ ತೋರುತ್ತಿದೆಯೆಂದು ಬ್ರಹ್ಮಚಾರಿ ಹೇಳುತ್ತಾನೆ. ಗಿರಿಜೆಯ ಧರ್ಮಾನುಸರಣೆಯಿಂದ ಧರ್ಮಕ್ಕೆ ಪ್ರಾಶಸ್ತ್ಯ.

ಹೀಗೆ ಗೌರಿಯನ್ನು ಕುರಿತ ವಟುವಿನ ಪ್ರಶಂಸೆ ಅವಳ ರೂಪದಿಂದ ತೊಡಗಿ ಅವಳ ತಪಸ್ಸು, ಶೀಲ, ಜ್ಞಾನ, ಧರ್ಮಗಳಲ್ಲಿ ವಿರಮಿಸಿರುವುದು. ಅರ್ಥಪೂರ್ಣವಾಗಿದೆ, ಔಚಿತ್ಯದಿಂದ ಕೂಡಿದೆ. ಶಂಕರನು ವಿಲಾಸಿನಿಯಾಗಿ ತನ್ನೆಡೆಗೆ ಬಂದ ಗಿರಿಜೆಯನ್ನು ತಿರಸ್ಕರಿಸಿ, ತಪಸ್ವಿನಿಯಾದ ಅವಳ ತಪಸ್ಸಿಗೆ ಮೆಚ್ಚಿ ತಾನಾಗಿ ಅವಳ 'ಕರವಿಡಿ'ಯಲು ಈಗ ಮೈದೋರಿರುವನೆಂಬುದನ್ನು ನೆನೆದರೆ ಮೇಲಿನ ಪ್ರಶಂಸಾ ವಾಕ್ಯಗಳ ಅರ್ಥಸ್ವಾರಸ್ಯದ ಅರಿವಾಗುವುದು.

ವಟುವೇಷದ ಶಂಕರನಿಗೆ ಗಿರಿಜೆಯ ತಪಸ್ಸಿನ ಉದ್ದೇಶದ ಅರಿವಾಗಿದೆ. ಆದರೂ ಅದೇನೆಂಬುದನ್ನು ಅವಳ ಬಾಯಿಂದಲೇ ಕೇಳಬೇಕೆಂದು ಅವನ ಕೆಣುಕುವ, ತುಂಟತನದ, ಕುತೂಹಲ. ಅವಳ ಆ ಉದ್ದೇಶ ಏನಿರಬಹುದು? ತನಗೆ ಹೇಳುಲು ಸಂಕೋಚವೆ? ಅವಳ ಸತ್ಕಾರ ಪಡೆದ ತನ್ನನ್ನು ಅವಳು ಹೊರಗಿನವನೆಂದು ಭಾವಿಸಬೇಕಾಗಿಲ್ಲ. ಏಳು ನುಡಿ ನುಡಿದಮೇಲೆ (ಅಥವಾ

ಏಳು ಹೆಜ್ಜೆ ಜೊತೆ ನಡೆದ ಮೇಲೆ: ಸಪ್ತಪದ ಸಾಂಗತ್ಯ) ಸಜ್ಜನರು ನಂಟರಷ್ಟೆ. ಇಂತು ಪ್ರಶ್ನಿಸುವ ತನ್ನನ್ನು ದಿಟ್ಟನೆಂದು ಭಾವಿಸಬಾರದು. ತಾನು ಕೇಳುತ್ತಿರುವುದು ಬ್ರಾಹ್ಮಣಸಹಜವಾದ ಚಾಪಲ್ಯದಿಂದ; ಕ್ಷಮಾಶೀಲೆಯಾದ ಅವಳಿಂದ ಕ್ಷಮೆ ದೊರೆಯುವುದೆಂಬ ನಂಬಿಕೆಯಿಂದ. ಸಲಿಗೆಯಿಂದ ಪ್ರಶ್ನಿಸಲು ಇವೇ ಕಾರಣಗಳು.

ವಾಕ್‌ಪಟುವಾದ ವಟು ಯಾವ ಬಗೆಯ ಆಕ್ಷೇಪಕ್ಕೂ ಅವಕಾಶವಿಲ್ಲದಂತೆ ತಕ್ಕ ಪೀಠಿಕೆ ಹಾಕಿ, ಗೋಪ್ಯವಲ್ಲದಿರುವ ಪಕ್ಷಕ್ಕೆ ತನ್ನ ಪ್ರಶ್ನೆಗೆ ಉತ್ತರ ಹೇಳಬೇಕೆಂದು 'ತಪೋಧನೆ'ಯನ್ನು ಕೇಳಿಕೊಳ್ಳುತ್ತಾನೆ.

ಇದಿಷ್ಟು ಉಪಚಾರದ ಮಾತು. ವಟು ಉತ್ತರಕ್ಕಾಗಿ ಕಾಯುವುದಿಲ್ಲ. ಅವನ ಮುಂದಿನ ಪ್ರಶ್ನೆಮಾಲಿಕೆ ಉತ್ತರವನ್ನೂ ಒಳಗೊಂಡಿದ್ದು, ಕಡೆಯುತ್ತರದ ಕಡೆಗೆ ಮೆಟ್ಟಲು ಮೆಟ್ಟಲಾಗಿ ಸಾಗುತ್ತದೆ; ಅವನು 'ಪ್ರಗಲ್ಭ ವಾಕ್' ('ಪ್ರೌಢ ಭಾಷಕ') ಎಂಬ ಅಂಶ ಹಜ್ಜೆ ಹಜ್ಜೆಗೂ ಸ್ಪಷ್ಟಗೊಳ್ಳುತ್ತದೆ.

ಗಿರಿಜೆಯ ತಪಸ್ಸು ಯಾವ ಫಲಪ್ರಾಪ್ತಿಗಾಗಿ?

ಜನನ, ಬ್ರಹ್ಮಕುಲದಲ್ಲಿ; ದೇಹವೋ, ಸೌಂದರ್ಯಸಾರದ ಗಣಿ; ಯೌವನ, ಹೊಚ್ಚಹೊಸತು; ಐಶ್ವರ್ಯದ ಸುಖವೆ, ಅದಕ್ಕೆ ಹುಡುಕಿಕೊಂಡು ಹೋಗಬೇಕಾಗಿಲ್ಲ (ಸಕಲೈಶ್ವರ್ಯಕ್ಕೂ ತವರಾದ ಹಿಮವಂತನ ಮಗಳಲ್ಲವೇ?)—ಇದಾವುದೂ ತಪಸ್ಸಿನ ಫಲವಾಗಿರಲಾರದು.

ವಿಪತ್ತು ಅಡಸಿದಾಗ ಮಾನವತಿಯರು ಅದರ ನಿವಾರಣೆಗೆ ತಪಸ್ಸು ಕೈಗೊಳ್ಳುವುದುಂಟು. ಎಷ್ಟು ವಿಚಾರ ಮಾಡಿದರೂ, ಪಾರ್ವತಿಯಲ್ಲಿ ತಾನು ಈ ಸಂದರ್ಭವನ್ನು ಕಾಣನು.

ದುಃಖದ ಹೊಡೆತವೆ? ಆ ಸುಂದರಾಕೃತಿಗೆ ದುಃಖವಡಸದು. ಅವಮಾನ? ತಂದೆಯ ಮನೆಯಲ್ಲಿ! ಸಾಧ್ಯವಿಲ್ಲ. ಹೊರಗಿನವರಿಂದ ಹಾನಿಯೆ? ಹಾವಿನ ಹೆಡೆಯ ರತ್ನಕ್ಕೆ ಕೈಹಾಕುವ (ಈ ಕನ್ಯಾರತ್ನವನ್ನು ಬಯಸುವ) ದಿಟ್ಟನೂ ಇರುವನೆ?

ಇದಾವುದೂ ಕಾರಣವಾಗಿರಲಾರದು ತಪಕ್ಕೆ.

ಎಂಥ ಅಸಮಂಜಸತೆ! ಯೌವನೋಚಿತವಾದ ಒಡವೆಗಳನ್ನುಳಿದು, ಮುಪ್ಪಿಗೆ ಒಪ್ಪುವ ನಾರುಡೆಯನ್ನು ಧರಿಸುವುದೆ? (ಈ ವಿಪರ್ಯಾಸಕ್ಕೆ ಪ್ರಬಲ ಕಾರಣವೇನು ಎಂಬ ಪ್ರಶ್ನೆ ಧ್ವನಿತ.)

ಸ್ವರ್ಗದ ಅಪೇಕ್ಷೆಯೆ ? ಪಿತನ ಪ್ರದೇಶವೆಲ್ಲ ದೇವಭೂಮಿಯೆ !

ಬಹುಶಃ ವರನ (ಪತಿಯ) ಬಯಕೆಯಿರಬಹುದು. ಒಂದು ವೇಳೆ, ಆ ಉದ್ದೇಶವಿದ್ದರೂ, ಅದಕ್ಕಾಗಿ ಈ ತಪಸ್ಸು ಸಲ್ಲದು; ಅದು ನಿಲ್ಲಲಿ. ಕಾರಣ: ರತ್ನವನ್ನು ಹುಡುಕಿಕೊಂಡು ಬರಬೇಕೇ ಹೊರತು ರತ್ನವೇ (ತನ್ನನ್ನು ಬಯಸು ವವರನ್ನು) ಹುಡುಕಿಕೊಂಡು ಹೋಗದಷ್ಟೆ ?

(ಆದರೆ, ಆ ಕನ್ಯಾರತ್ನವನ್ನು ತಾನೇ ಹುಡುಕಿಕೊಂಡು ಬಂದಿರುವುದರಿಂದ, ಇನ್ನು ತಪಸ್ಸು ಸಾಕು ಎಂದು ವಾಕ್ಚತುರ ವಟುವಿನ ಮಾತಿನ ಧ್ವನಿ.)

ಪತಿಯ ಮಾತೆತ್ತಿದುದರಿಂದ, ಪಾರ್ವತಿ ನಿಟ್ಟುಸಿರುಬಿಟ್ಟಿರಬೇಕು. ಈ ನಿಶ್ವಾಸದಿಂದ, ಪತಿಯ ಅಪೇಕ್ಷೆಯೇ ಅವಳ ತಪಸ್ಸಿನ ಗುರಿಯಿರಬೇಕೆಂದು ತನಗೆ ಖಚಿತವಾಗಿದ್ದರೂ, ಆ ಬಗೆಗೆ ಇನ್ನೂ ಸಂಶಯವೆಂದೇ ವಟುವಿನ ನಟನೆಯ ಮಾತು. ಗಿರಿಜೆಯು ಪ್ರಾರ್ಥಿಸಲು ಅರ್ಹನಾದವನು ಯಾವನೂ ಇರಲಾರನು; ಇದ್ದಿದ್ದರೆ, ಅವಳು ಪ್ರಾರ್ಥಿಸಿಯೂ ಅವನು ದೊರೆಯದೆ ಇರನು. (ಪ್ರಾರ್ಥಿಸಿರು ವುದರಿಂದ, ದೊರೆತೇ ದೊರೆಯುತ್ತಾನೆ ಎಂದು ಧ್ವನಿ.) ಗಿರಿಜೆಯ ಮನದ ಬಯಕೆಯ ಆ ಯುವಕನಾದರೂ ಎಂಥ 'ಸ್ಥಿರ'ನಾಗಿರಬೇಕು! (ಶಿವನೂ 'ಸ್ಥಾಣು', ಸ್ಥಿರ-ತಾನೆ!) ಕರ್ಣೋತ್ಪಲವು ಮೆರೆಯಬೇಕಾದ ಕಪೋಲದೆಡೆ ಯಲ್ಲಿ ಜಟೆಯ ಕೂದಲು ಇಳಿಯಬಿದ್ದಿರುವುದನ್ನೂ ಉಪೇಕ್ಷಿಸಿರುವನಲ್ಲಾ ಅವನು! ಮುನಿಜನಸಹಜವಾದ ವ್ರತಗಳಿಂದ ಕೃಶತರವಾಗಿರುವ, ಹಗಲೊಗೆದ ಚಂದ್ರಕಲೆ ಯಂತೆ ಕಾಣುವ ಅವಳನ್ನು ನೋಡಿದ ಯಾರ ಮನಸ್ಸು ತಾನೆ ಪರಿತಾಪಕ್ಕೊಳ ಗಾಗದು ?

(ವಟುವಿನ ಕುತೂಹಲ ಈಗ ಕನಿಕರವಾಗಿ ಮಾರ್ಪಟ್ಟಿದೆ.) ಅವಳ ಚತುರ ವಾದ ನೋಟಕ್ಕೆ ತನ್ನ ಮುಖವನ್ನು ತೋರದ ಆ ಪ್ರಿಯನು ತನ್ನ ಸೌಭಾಗ್ಯದ ಅಹಂಕಾರದಿಂದ ಹಾಗೆ ವರ್ತಿಸಿದ್ದರೆ, ಆ ಅಹಂಕಾರದಿಂದಲೆ ತಾನು ವಂಚಿತ ನಾಗಿದ್ದಾನೆ. (ಗಿರಿಜೆಯನ್ನು ನೋಡದ ಅವನ ಬಾಳು ವ್ಯರ್ಥ.)

ಗೌರಿ ಇನ್ನೆಷ್ಟು ಕಾಲ ಕಷ್ಟಪಡುವುದು ? ಅವಳು ಬಯಸಿರುವ ವರನನ್ನು ಪಡೆಯಲು ವಟು ತನ್ನ ಬ್ರಹ್ಮಚರ್ಯಾಶ್ರಮದಲ್ಲಿ ಗಳಿಸಿರುವ ತಪಸ್ಸಿನ ಅರ್ಧ ಭಾಗವನ್ನು ಅವಳಿಗೆ ಕೊಡಲು ಸಿದ್ಧ. ಆದರೆ, ಆ ವರ ಯಾರೆಂಬುದನ್ನು ಸರಿಯಾಗಿ ತಿಳಿಯಬೇಕೆಂದು ಮಾತ್ರ ಅವನ ಅಪೇಕ್ಷೆ.

ಕಪಟ ವಟುವಿನ ಮರ್ಮಭೇದಕವಾದ ಚತುರಾಲಾಪ ಇಂತು ಗಿರಿಜೆಯ

ಮನಸ್ಸಿನ ಆಳಕ್ಕೆ ಗಾಳ ಹಾಕುತ್ತದೆ. ಆದರೆ, ತನ್ನ ಮನೋಗತವನ್ನು ತಿಳಿಸಲು ಗಿರಿಜೆ ಅಸಮರ್ಥಳಾಗಿದ್ದಾಳೆ. ತನ್ನ ಪಕ್ಕದಲ್ಲಿದ್ದ ಸಖಿಯ ಕಡೆಗೆ ತಿರುಗಿ ನೋಡುತ್ತಾಳೆ. ಗಿರಿಜೆಯ ಇಂಗಿತ ಸಖಿಗೆ ಅರ್ಥವಾಗುತ್ತದೆ.

ಮುಂದಿನ ಮಾತೆಲ್ಲ ಸಖಿಯದು.

## ಗಿರಿಜಾ-ವಟುವೇಷಧಾರಿ ಶಂಕರರ ವಾಗ್ವಾದ

ವಟುವೇಷದ ಶಂಕರನ ಪ್ರಶ್ನೆಗಳಿಗೆ ಮೊದಲು ಗಿರಿಜೆಯ ಸಖಿ ಉತ್ತರ ಕೊಡುತ್ತಾಳೆಯಷ್ಟೆ. ಅವಳ ಉತ್ತರ ರೂಪದ ಕಥನದಲ್ಲಿ, ತಪಸ್ಸಿಗೆ ಮುನ್ನ ಪಾರ್ವತಿ ತನ್ನ ಪ್ರಿಯ-ತನ್ನ ಭಾವೀಪತಿ-ಶಿವನನ್ನು ಕುರಿತು ಹಂಬಲಿಸಿದ ವಿರಹಿಣಿಯ ದಾರುಣ ವೇದನೆಯ ಚಿತ್ರ ಸ್ಫುಟವಾಗಿ ಮೂಡಿ ಗೋಚರಿಸುತ್ತದೆ. ತನಗಾಗಿ ಗಿರಿಜೆ ಪಟ್ಟಿರುವ ಹೃದಯ ವೇದನೆ ಎಂಥದು ಎಂದು ಶಿವನ ಹೃದಯಕ್ಕೂ ತಾಕುತ್ತದೆ. ಶಿವನನ್ನು ದೊರಕಿಸಿಕೊಳ್ಳಲು ಬೇರೆಯ ಉಪಾಯ ಕಾಣದೆ ಗಿರಿಜೆ ಉಗ್ರವಾದ ತಪಸ್ಸನ್ನು ಕೈಕೊಂಡಳೆಂದೂ, ಆದರೂ ಅವಳ ಮನೋರಥ ಇನ್ನೂ ಸಿದ್ಧಿಸಿಲ್ಲವೆಂದೂ ಸಖಿ ತನ್ನ ಕಥನವನ್ನು ಮುಗಿಸುತ್ತಾಳೆ.

ಸಖಿ ಬಿತ್ತರಿಸುವ ವಿರಹಿಣಿಯ ಚಿತ್ರ ಎಷ್ಟೇ ಸ್ವಾರಸ್ಯವಾಗಿದ್ದರೂ, ಎಷ್ಟೇ ಕಣ್ಣಿಗೆ ಕಟ್ಟಿದಂತಿದ್ದರೂ, ಪರೋಕ್ಷ ಕಥನ ರೂಪದ್ದು ; ಸ್ಮರಣಚಿತ್ರ ; ಕಾವ್ಯ ಕಥೆಯ ಘಟನೆಗಳಲ್ಲಿ ಒಂದಲ್ಲ; ಎಂದೇ, ದೃಶ್ಯ ರಮ್ಯತೆಯನ್ನು ಹೊಂದಿಲ್ಲ.

ಆದರೆ, ಮುಂದೆ ಗಿರಿಜೆ ಮತ್ತು ವಟುವೇಷಧಾರಿಯಾದ ಶಿವನ ನಡುವೆ ನಡೆಯುವ ಮಾತುಕತೆ ಅವರ ಮುಂದಿನ ಸಮಾಗಮಕ್ಕೆ ಮುನ್ನಡಿಯಂತಿದ್ದು, ಕಾವ್ಯದ ಮುಖ್ಯ ಘಟನೆಗಳಲ್ಲಿ ಒಂದಾಗಿವೆ. ಆ ಮಾತುಕತೆ ಕೇವಲ ಸರಸ ಸಂವಾದವಲ್ಲ; ವಾದ ಪ್ರತಿವಾದದ ಘರ್ಷಣೆಯುಳ್ಳ ಸಾರ್ಥಕ ವಾಗ್ವಾದ. ವಟುವಂತೂ 'ಪ್ರಗಲ್ಭ ವಾಕ್,' ಉದ್ದೇಶ ಪೂರ್ವಕವಾಗಿ ವಾಕ್ಚಾತುರ್ಯವನ್ನು ಮೆರೆಯುತಿದ್ದಾನೆ; ಇದರಲ್ಲಿ ಹೊಸ ಅಚ್ಚರಿ ಏನೂ ಇಲ್ಲ. ಆದರೆ, ವಟು ಎತ್ತುವ ಆಕ್ಷೇಪಗಳಿಗೆ ಗೌರಿ ಕೊಡುವ ಉತ್ತರ ಅನಿರೀಕ್ಷಿತವಾಗಿ ನಮ್ಮನ್ನು ಬೆರಗುಗೊಳಿಸುತ್ತದೆ. ವಟುವಿನ ಪರಿಹಾಸ ಭಾಷಣ, ಅದಕ್ಕೆ ಗೌರಿಯ ಗಂಭೀರ ವಚನದ ಉತ್ತರ-ಇವೆರಡರ ಪರಸ್ಪರ ವಿರುದ್ಧ ಸ್ವಭಾವಗಳಲ್ಲಿಯೆ ಆ ನಾಟಕೀಯ ಗುಣ, ಆ ಘರ್ಷಣೆ, ಅಡಗಿರುವುದು. ಹಾಗೆಯೇ ಮನಸ್ಸಿನಲ್ಲಿ

ಕಲ್ಪಿಸಿಕೊಳ್ಳಿ : ಹಿಂದೆ ಸಖಿ ನಿಂತಿದ್ದಾಳೆ, ಬಹುಶಃ; ಮುಂದೆ, ನಗೆ ನುಡಿಯಾಡಿ ನಗುತ್ತ ನಿಂತಿದ್ದಾನೆ ಬ್ರಹ್ಮಚಾರಿ; ಪ್ರೇಮ ಪರೀಕ್ಷೆಗೊಳಗಾದ ಗೌರಿ, ಭಾವೀ ಪತಿಯ ನಿಂದೆಯಿಂದ ನೊಂದು, ನೊಂದರೂ ಎದೆಗುಂದದೆ ತನ್ನ ಪ್ರೇಮ ನಿಷ್ಠೆಯನ್ನು ವ್ಯಕ್ತಪಡಿಸುತ್ತಾಳೆ—ಸಮುಚಿತವಾಗಿ, ಪ್ರಿಯಭಾಷಿಣಿಯಾಗಿ. ಪರೀಕ್ಷೆ ಮುಗಿಯಿತು; ತೀರ್ಗಡೆಯಾದ ತಪಸ್ವಿನಿಯನ್ನು ಚಿರತಾಪಸನಾದ ಶಂಕರ ನಿಜರೂಪದಲ್ಲಿ ಒಪ್ಪುಗೊಳ್ಳುತ್ತಾನೆ. ಸೋತವಳು ಗೆಲ್ಲುತ್ತಾಳೆ; ಗೆದ್ದವನು ಸೋಲುತ್ತಾನೆ. ವ್ಯಂಗ್ಯ ವಿಡಂಬಕ ವಟು, ಪ್ರೇಮಯೋಗಿನಿ—ಗಿರಿಜೆ ಇವರಿಬ್ಬರ ಪಾತ್ರ ನಿಚ್ಚಳವಾಗಿ ನಿಲ್ಲುತ್ತವೆ. ಇಂತು, ಕಾವ್ಯದಲ್ಲೆಲ್ಲ ಅತ್ಯಂತ ಮನೋಜ್ಞವಾದ ನಾಟಕೀಯ ಸನ್ನಿವೇಶ ಇದು.

ಇನ್ನು, ಸಂಕ್ಷೇಪವಾಗಿ, ಇವರಿಬ್ಬರ ವಾಗ್ವಾದದ ಸ್ವಾರಸ್ಯವನ್ನು ಸವಿಯೋಣ :

ಇಂಗಿತಜ್ಞೆಯಾದ ಸಖಿಯ ಮಾತಿನಿಂದ ಸುಂದರನಾದ ಆ ವಟು ಹರ್ಷಗೊಂಡನು; ಆದರೆ, ಅದನ್ನು ತೋರಗೊಡಲಿಲ್ಲ. (ಶಿವನಾಗಿ ಗಿರಿಜೆಯ ಪ್ರೇಮ ವೃತ್ತಾಂತ ಅವನ ಸಂತೋಷಕ್ಕೆ ಕಾರಣ; ಹೊರಗಿನವನಾಗಿ ವಟುವೇಷದಲ್ಲಿ ಅದನ್ನು ಪ್ರಕಟಪಡಿಸುವುದು ಸಲ್ಲದಷ್ಟೆ!)

ಗಿರಿಜೆಯನ್ನೇ ಕೇಳಿದನು, "ಈಕೆ ಹೇಳಿದ್ದೆಲ್ಲ ನಿಜವೆ? ಇಲ್ಲ, ಪರಿಹಾಸವೋ?" ಎಂದು.

ಅದುವರೆಗೂ ಜಪದಲ್ಲಿ ಮಗ್ನಳಾಗಿದ್ದ ಗಿರಿಜೆ ಮೊಗ್ಗಿನಂತೆ ಮೆರೆಯುವ ತನ್ನ ಕೈ ತುದಿಗೆ ಜಪಸರವನ್ನು ತಂದು, ಬಹಳ ಕಾಲ ಯೋಚಿಸಿ ಜೋಡಿಸಿದ ಮಿತವಾದ ಮಾತಿನಿಂದ ಶಿವನಿಗೆ ಉತ್ತರ ಕೊಟ್ಟಳು. ಹಾಗೆ ಉತ್ತರ ಕೊಡುವಂದು, 'ಶ್ರೇಷ್ಠನಾದ ವೇದವಿದನೆ' ಎಂದು ಮೊದಲು ಗೌರವ ಪೂರ್ವಕವಾಗಿ ಸಂಬೋಧಿಸಿ, ಸಂದೇಹಕ್ಕೆಡೆಯಿಲ್ಲದಂತೆ ಸ್ಪಷ್ಟವಾಗಿ, ಸಂಕ್ಷೇಪವಾಗಿ ನುಡಿದಳು :

"ನೀನು ಕೇಳಿದ್ದು ನಿಜ. ನಾನು (ಶಿವನ ಮಡದಿಯೆನಿಸುವ) ಆ ಉಚ್ಚ ಪದವಿಯನ್ನು ಏರಲು ಉತ್ಸುಕಳಾಗಿರುವೆನು. ನನ್ನ ಈ ತಪಸ್ಸು ಆ ಪದವಿಯನ್ನು ದೊರಕಿಸಿಕೊಳ್ಳಲು ಸಾಧನ. ಎಷ್ಟೇ ದೂರದ ಗುರಿಯಾಗಲೀ ಮನೋರಥವು ಮುಟ್ಟಬಯಸದ ಗುರಿ ಯಾವುದಿದೆ?"

ಬಳಿಕ ಬ್ರಹ್ಮಚಾರಿ, ಗಿರಿಜೆಯ ಉದ್ದೇಶವನ್ನು ಹೀಯಾಳಿಸಿ, ಶಿವನನ್ನು

ಉಗ್ರವಾಗಿ ನಿಂದಿಸತೊಡಗಿದನು. ಈಶ್ವರನ ಲೋಕಪ್ರಸಿದ್ಧವಾದ ಚರಿತೆಯೇ ಈ ನಿಂದೆಯ ತಿರುಳು. ಶಿವನು ತನ್ನನ್ನು ತಾನೇ ಲೇವಡಿಮಾಡಿಕೊಳ್ಳುತ್ತಿದ್ದಾನೆ. ಅದು ಎಷ್ಟರಮಟ್ಟಿಗೆ ನಿಂದೆಯೋ ಅಷ್ಟರಮಟ್ಟಿಗೆ ಸ್ತುತಿಯೂ ಹೌದು. ಇತರರನ್ನು ಹಾಸ್ಯಮಾಡುವುದಕ್ಕಿಂತಲೂ ತನ್ನನ್ನೆ ತನ್ನ ಹಾಸ್ಯಕ್ಕೆ ಗುರಿಪಡಿಸುವುದು ಉತ್ತಮ ಮಟ್ಟದ ಹಾಸ್ಯ ಪ್ರವೃತ್ತಿ. ಶಿವ ನಿಂದೆಯೆಲ್ಲ ಆತ್ಮನಿಂದೆ; ಆ ನಿಂದೆಯೆಲ್ಲ ಸ್ತುತಿ. ಇದೇ ಸನ್ನಿವೇಶದ ಸ್ವಾರಸ್ಯ.

ಬ್ರಹ್ಮಚಾರಿಯ ಶಿವನಿಂದೆ ಇಂತು ಸಾಗಿತು :

ಮಹೇಶ್ವರನು ಲೋಕ ಪ್ರಸಿದ್ಧನು! ಅದನ್ನು ತಿಳಿದೂ ಗಿರಿಜೆ ಅವನನ್ನು ಬಯಸುವುದೇ ? ಅವನು ಅಮಂಗಳದಲ್ಲಿಯೇ ಆಸಕ್ತನೆಂಬುದನ್ನು ಯೋಚಿಸಿದ ಮೇಲೆ, ಅವಳ ನಡೆವಳಿಕೆಯಲ್ಲಿ ತಾನು ಉತ್ಸಾಹ ತೋರುವುದು ಸಾಧ್ಯವಿಲ್ಲ. ಮದುವೆಯ ಕಂಕಣ ಕಟ್ಟಿದ ಕೋಮಲವಾದ ಅವಳ ಕೈ ಹಾವನ್ನೇ ಬಳೆಮಾಡಿ ಕೊಂಡ ಶಂಭುವಿನ ಆ ಕೈಯ್ಯನ್ನು ಮೊದಲ ಸಲ ಹಿಡಿಯುವುದಾದರೂ ಹೇಗೆ ? ಆ ಸೋಂಕು ಸಹ್ಯವಾದೀತೆ ?

ಗಿರಿಜೆ ಶಿವನನ್ನಲ್ಲದೆ ಇನ್ನು ಯಾರನ್ನು ವರಿಸಿದರೂ ಮದುವೆ ಎಷ್ಟು ವಿಜೃಂಭಣೆಯಿಂದ ನಡೆದೀತು! ಶಿವನನ್ನು ವರಿಸಿದರೆ ಆ ವೈಭವ ಎಲ್ಲಿಂದ ಬರಬೇಕು ? ಎಲ್ಲೆಲ್ಲೂ ಕಾದಿರುವುದು ಎಲ್ಲರ ಪರಿಹಾಸ! ಈ ಒಂದು ವೈಪರೀತ್ಯದ ಚಿತ್ರವನ್ನು ವಟು ಗಿರಿಜೆಯ ಮುಂದಿಡುತ್ತಾನೆ.

ರಾಜಹಂಸಗಳ ಚಿತ್ರಗಳುಳ್ಳ, ವಧು ಗಿರಿಜೆಯ ದುಕೂಲಕ್ಕೂ ರಕ್ತ ತೊಟ್ಟಿಕ್ಕುವ ಶಿವನ ಗಜಚರ್ಮಕ್ಕೂ ಮೇಳವಾಗುವುದೆ?

ಹೂವಿನ ರಾಶಿಯನ್ನು ಹರಡಿರುವ ಮದುವೆಯ ಮಂಟಪದಲ್ಲಿ ಹೆಜ್ಜೆ ಯಿಟ್ಟಾದ ಮೇಲೆ, ಲಾಕ್ಷಾರಸದ ಲೇಪದಿಂದ ಮೆರೆಯುವ ಅವಳ ಪಾದಗಳು ಆ ಬಳಿಕ ಕೂದಲ ರಾಶಿ ಕೆದರಿ ಬಿದ್ದಿರುವ ಶ್ಮಶಾನವನ್ನು ಮೆಟ್ಟುವುದನ್ನು ಶತ್ರುವೇ ಆದರೂ ಒಪ್ಪಿಯಾನೇ ? ಮದುವಣಗಿತ್ತಿಯಾದ ಗಿರಿಜೆ ಗಜರಾಜನ ಮೇಲೆ ಕುಳಿತು ಗಂಡನ ಮನೆಗೆ ಹೋಗಬೇಕಾದದ್ದು ಯುಕ್ತ. ಅದು ಬಿಟ್ಟು, ಈಶ್ವರನ ಮುದಿಯೆತ್ತಿನ ಮೇಲೆ ಕುಳಿತು ಹೊರಟರೆ, ಅವಳಿಗೆ ಕಾದಿರುವುದು ಜನರ ಪರಿಹಾಸದ ಸ್ವಾಗತ. ಇಬ್ಬರ ಸ್ಥಿತಿ ತುಂಬ ಶೋಚನೀಯವಾಗಿದೆ: ಒಬ್ಬಳಂತೂ, ಆಗಲೇ ಶಿವನ ಮುಡಿಯಲ್ಲಿ ಬಿದ್ದ ಚಂದ್ರಕಲೆ; ಇನ್ನೊಬ್ಬಳು, ಈಗ ಪಿನಾಕಿಯ ಸಮಾಗಮವನ್ನು ಬಯಸುತ್ತಿರುವ, ಇಳೆಯ ಕಣ್ಣ ಬೆಳುದಿಂಗಳಾದ ಗಿರಿಜೆ!

ಇನ್ನು ಆ ಮಹೇಶ್ವರನ ವ್ಯಕ್ತಿವೈಶಿಷ್ಟ್ಯವೋ! ಕುಲವನ್ನು ತೆಗೆದುಕೊಂಡರೆ, ಗೊತ್ತಿಲ್ಲದ ಕುಲ; ರೂಪವೋ, ಮೂರು ಕಣ್ಣುಳ್ಳ ವಿಕಾರ ದೇಹ; ಅವನ ಸಿರಿ, ಲೋಕವಿದಿತ: ಉಡಲು ಹೊದೆಯಲು ಇಲ್ಲದ ದಿಗಂಬರ! (ಬತ್ತಲೆ ವೈಯವನು!) ಗಿರಿಜೆ ವರಿಸಿದ ಇವನ ಈ ಗುಣಗಳಲ್ಲಿ ಅಪೇಕ್ಷಿಸಬಹುದಾದದ್ದು ಒಂದಾದರೂ ಇದೆಯೆ?

ವಟು ಇಂತು ಗಿರಿಜೆಯ ಮನಸ್ಸಿನಲ್ಲಿ ಶಿವನ ಬಗೆಗೆ ಹೇವರಿಕೆಯುಂಟಾಗಲು ಎಷ್ಟು ಬೇಕೋ ಅಷ್ಟು ಶಿವನಿಂದೆಯನ್ನು ಮಾಡಿ, "ಸೌಭಾಗ್ಯ ಲಕ್ಷಣಗಳುಳ್ಳ ನೀನೆಲ್ಲಿ, ಅಂತಿರುವ ಅವನೆಲ್ಲಿ? ಯಜ್ಞಸ್ತಂಭಕೆ ಸಲ್ಲುವ ವೇದವಿಹಿತವಾದ ಪವಿತ್ರ ಸಂಸ್ಕಾರ ವಿಧಿಗಳನ್ನು ಯಾರಾದರೂ ಮಸಣದ ಶೂಲಕ್ಕೆ ಮಾಡುವರೆ? ನಿನ್ನ ಮನಸ್ಸನ್ನು ಹೊಲ್ಲದಾದ ಆ ಬಯಕೆಯಿಂದ ಈ ಕಡೆ ತಿರುಗಿಸು" ಎಂದು ಖಂಡಿತವಾಗಿ ನುಡಿದನು.

ತನ್ನ ಹೃದಯದ ಹಂಬಲಕ್ಕೆ ವಿರುದ್ಧವಾದ ಆ ಹಾರುವನ ನುಡಿಗಳನ್ನು ಕೇಳಿ, ಪಾರ್ವತಿಗೆ ಕೋಪ ಉಕ್ಕೇರಿತು. ಅವಳು ತನ್ನ ಹೃದಯೇಶ್ವರನನ್ನು ಸಮರ್ಥಿಸಿ ಅವನಿಗೆ ಇಂತು ಹೇಳಿದಳು:

"ಹರನ ನಿಜಸ್ವರೂಪವನ್ನು ನೀನು ಅರಿಯೆ. ಆದ್ದರಿಂದ ಹೀಗೆ ಹೇಳುವೆ. ಲೋಕೋತ್ತರರಾದ ಮಹಾತ್ಮರ ನಡೆವಳಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾರದ ಮಂದಮತಿಗಳು ಅವರನ್ನು ದೂಷಿಸುವುದು ಸಹಜವೆ."

ವಟು ಶಿವನನ್ನು ಅಮಂಗಳಾಭ್ಯಾಸದಲ್ಲಿ ಆಸಕ್ತಿಯುಳ್ಳವನೆಂದನಲ್ಲವೆ?

ಮಂಗಳವನ್ನು ಆಶ್ರಯಿಸುವವರು ಯಾರು? ವಿಪತ್ತಿನ ನಿವಾರಣೆಯಲ್ಲಿ ಆಸಕ್ತರಾದ, ಇಹಲೋಕದ ಸುಖಸಂಪದಗಳನ್ನು ಬಯಸುವ, ಸಾಮಾನ್ಯ ಜನ. ಜಗತ್ತಿಗೆ ಆಶ್ರಯದಾತನಾದ ಶಿವನಿಗೆ ಯಾವ ಬಯಕೆ? ತೃಷ್ಣೆಯನ್ನುಂಟು ಮಾಡಿ ಆತ್ಮದ ಸಹಜ ಪ್ರವೃತ್ತಿಯನ್ನು ನಾಶಮಾಡುವ ಅಂತಹ ಕೀಳುಕಾಮನೆಗಳಿಂದ ಅವನಿಗೆ ಆಗಬೇಕಾದದ್ದೇನು?

ಶಿವನನ್ನು ಶ್ಮಶಾನವಾಸಿಯೆಂದನಲ್ಲವೆ ವಟು? ಆದರವನು ಮೂರು ಲೋಕಗಳಿಗೂ ಒಡೆಯನು. ದರಿದ್ರ ದಿಗಂಬರನೆಂದು ಪ್ರಸಿದ್ಧನಾದ ಅವನು ಸಕಲ ಸಂಪತ್ತುಗಳ ನೆಲೆ. ಭಯಂಕರ ರೂಪನಾದ ಅವನು ಶಿವನೂ ಹೌದು. ಪಿನಾಕಿಯ ನಿಜ ಸ್ವರೂಪವನ್ನು ಅರಿತವರಿಲ್ಲ.

ಶಿವನು, ಒಡವೆಗಳಿಂದ ಮೆರೆಯುವವನೋ, ಹಾವುಗಳನ್ನು ಬಿಗಿದಿರು

ವವನೋ, ಆನೆಯ ಚರ್ಮವನ್ನು ಧರಿಸಿದವನೋ ಚಂದ್ರನನ್ನು ಮುಡಿದಿರುವನೋ-ಆ ವಿಶ್ವಮೂರ್ತಿಯ ಶರೀರಾಕೃತಿಯನ್ನು ನಿರ್ಧರಿಸುವವರು ಯಾರು? ಅವನು ಎಲ್ಲವೂ ಹೌದು.

ಅವನು ಬೂದಿಬಡುಕನೇ ಇರಬಹುದು; ಆದರೂ ಅವನ ಅಂಗ ಸಂಪರ್ಕದಿಂದ ಲಭಿಸುವ ಚಿತಾಭಸ್ಮದ ಕಣಗಳು ಶುದ್ಧಿಕಾರಕ. ತಾಂಡವಮೂರ್ತಿಯಾದ ಅವನು ನಾಟ್ಯಾಭಿನಯದಲ್ಲಿ ತೊಡಗಿರುವಾಗ, ಅವನ ದೇಹದಿಂದ ಉದುರಿದ ಬೂದಿಯನ್ನು ದೇವತೆಗಳು ತಮ್ಮ ಕಿರೀಟಗಳಿಗೆ ಲೇಪಿಸಿಕೊಳ್ಳುವರು.

ಮದುವೆಯಾದ ಮೇಲೆ ಗಜಾರೋಹಣದ ಸೌಭಾಗ್ಯವನ್ನು ತ್ಯಜಿಸಿ, ಶಿವನೊಡನೆ ಮುದಿಯೆತ್ತನ್ನು ಏರಿಹೋಗಬೇಕಾಗುವುದೆಂದು ಹಾಸ್ಯಮಾಡಿದನಲ್ಲವೆ ವಟು?

ದಿಗ್ಗಜವನ್ನು ಏರಿಹೋಗುವ ಇಂದ್ರನು ಕೂಡ ಮುದಿಯೆತ್ತನ್ನು ಏರಿದ ಈ ದರಿದ್ರನನ್ನು ಕಂಡಕೂಡಲೆ, ಆನೆಯಿಂದ ಇಳಿದು ಈ ಶಿವನ ಪಾದಗಳಿಗೆ ಕಿರೀಟವನ್ನು ಸೋಕಿಸಿ ಎರಗುವನು.

ಇನ್ನು ಕುಲದ ಮಾತು: ಈಶ್ವರನ ದೋಷಗಳನ್ನೆ ಎತ್ತಿ ಆಡುವ ಅಪೇಕ್ಷೆಯಿದ್ದರೂ ವಟು ತನ್ನನ್ನು ತಾನೆ ಮರೆತು ಒಂದು ನಿಜವನ್ನೇ ಆಡಿಬಿಟ್ಟಿರುವನೆಂದು ಗಿರಿಜೆ ಹೇಳುತ್ತಾಳೆ. ಈಶನು ಬ್ರಹ್ಮದೇವನಿಗೂ ಮೂಲ ಕಾರಣನೆಂದು ಹೇಳುತ್ತಿರಲಾಗಿ, ಅವನ ಜನ್ಮ ವಿಚಾರ ಹೇಗೆ ತಾನೆ ಗೊತ್ತಾದೀತು?

ಹೀಗೆ, ವಟುವಿನ ಶಿವಖಂಡನವನ್ನೆ ಶಿವಮಂಡನವನ್ನಾಗಿ ತಿರುಗಿಸಿ ಹೇಳಿ, ಎಲ್ಲ ಅಂಶಗಳಲ್ಲಿಯೂ ಶಿವನು ವಟು ಹೇಳಿದಂತೆಯೇ ಇರುವನಾದ್ದರಿಂದ ವಿವಾದ ಕೊನೆಗೊಳ್ಳಲೆಂದು ತಿಳಿಸಿ, ಶಿವನಲ್ಲಿ ತನ್ನ ಸ್ಥಿರಪ್ರೇಮವನ್ನು ಸ್ಪಷ್ಟಪಡಿಸುತ್ತಾಳೆ, ಗಿರಿಜೆ. ತಮ್ಮ ಇಷ್ಟದಂತೆ ನಡೆಯುವವರು ಇತರರ ನಿಂದೆಯನ್ನು ಗಮನಿಸುವುದಿಲ್ಲವೆಂದು ತನ್ನ ದೃಢನಿಶ್ಚಯವನ್ನು ಅರುಹಿ, ವಟುವಿನ ಬಾಯಿಕಟ್ಟುತ್ತಾಳೆ.

ಆದರೆ, ಇನ್ನೇನನ್ನೋ ನುಡಿಯಬೇಕೆಂದಿದ್ದ ವಟುವಿನ ಇಚ್ಛೆ ಅವನ ತುಟಿಯ ಅಲುಗಾಟದಿಂದ ವ್ಯಕ್ತಪಡುತ್ತದೆ. ಶಿವಪ್ರೇಮಪರಾಯಣೆಯಾದ ಗಿರಿಜೆ ಇನ್ನು ಹೆಚ್ಚಿನ ಶಿವನಿಂದನೆಯನ್ನು ಕೇಳಲು ಸಿದ್ಧಳಾಗಿಲ್ಲ. ಅವನನ್ನು ತಡೆ ಎಂದು ಸಖಿಗೆ ಹೇಳುತ್ತಾಳೆ. "ಮಹತ್ತಾದುದನ್ನು ಯಾರು ನಿಂದೆ ಮಾಡುತ್ತಾರೋ ಅವರು ಮಾತ್ರವಲ್ಲ, ಅವರಿಂದ ಅದನ್ನು ಕೇಳಿದವರೂ ಪಾಪ ಭಾಗಿಗಳಾಗುತ್ತಾರೆ. ಆದ್ದರಿಂದ, ಈ ಎಡೆಯನ್ನು ಬಿಟ್ಟು ಬೇರೆಯ ಕಡೆಗೆ ಹೋಗುತ್ತೇನೆ" ಎಂದು

ಗಿರಿಜೆ ಹೊರಡಲು ಉದ್ಯುಕ್ತಳಾದಳು. ಆಗ, ಶಿವನು ತನ್ನ ಸ್ವರೂಪವನ್ನು ಮೆರೆದು, ನಸುನಗುತ್ತ, ಅವಳ ಕೈ ಹಿಡಿದುಕೊಂಡನು. ಇದು ಮುಂದೆ ನಡೆಯುವ ಗಿರಿಜಾ ಶಂಕರರ ಪಾಣಿಗ್ರಹಣಕ್ಕೆ ಸಂಕೇತ ರೂಪದ ಪೀಠಿಕೆ.

ಇಲ್ಲಿಗೆ ಈ ವಾಗ್ವಾದದ ಪ್ರಕರಣ ಮುಗಿದಂತೆ. ವಾಕ್ಚಾತುರ್ಯವನ್ನು ಮೆರೆದ ಆ 'ಪಗಲ್ಭವಾಕ್' ಎಲ್ಲಿ, 'ಇಂದಿನಿಂದಲಿ ನಾನು ನಿನ್ನ ದಾಸನು, ಕ್ರೀತ ನಿನ್ನ ತಪದಿಂ' ಎಂದ ಈ ಚಂದ್ರಮೌಳಿಯೆಲ್ಲಿ! ಅವನು ಅವಳ ಉಗ್ರ ತಪಸ್ಸಿಗೆ ಮೆಚ್ಚಿ ಬಂದಿದ್ದರೆ, ತನ್ನಲ್ಲಿ ಅವಳ ಅಚಲ ಪ್ರೇಮವನ್ನು ಕಂಡು ಮಾರು ಹೋಗಿದ್ದಾನೆ.

ಗಿರಿಜೆಯ ತಪಸ್ಸು ಅವಳಿಗೆ ಬಯಸಿದ ಫಲವನ್ನು ನೀಡಿತು.

## ೩

## ಪಾತ್ರ ಸೃಷ್ಟಿ: ಮಾನವೀಯ ದೃಷ್ಟಿ

'ಕುಮಾರ ಸಂಭವ'ದ ಸನ್ನಿವೇಶಗಳು ಹೇಗೆ ನಾಟಕೀಯ ರಮ್ಯತೆಯಿಂದ ಶೋಭಿಸುತ್ತಿವೆ ಎಂಬುದನ್ನು ಈವರೆಗೆ ಪರಿಶೀಲಿಸಿದ್ದಾಯಿತು. ನಾಟಕವೇ ಆಗಲಿ ಕಾವ್ಯವೇ ಆಗಲಿ, ಅದಕ್ಕೆ ಹೆಚ್ಚಿನ ಬೆಲೆ ಬರಬೇಕಾದರೆ ಅದರಲ್ಲಿನ ಪಾತ್ರಸೃಷ್ಟಿಯಿಂದ.

ಕಾವ್ಯದ ಪಾತ್ರಗಳೆಲ್ಲ ದೇವತಾ ವರ್ಗಕ್ಕೆ ಸೇರಿದವರು. ಪರ್ವತೇಶ್ವರನಾದ ಹಿಮಾಲಯನು ದೇವತಾತ್ಮನು; ಅವನ ಪತ್ನಿ ಮೇನಾದೇವಿಯೂ ಮರ್ತ್ಯಳಲ್ಲ, 'ಪಿತೃ ಮನೋಜನ್ಯೆ.' ಇವರ ಮಗಳಾಗಿ ಹುಟ್ಟಿದ ಸತೀ ದೇವಿ, ಹಿಂದಣ ಜನ್ಮದಲ್ಲಿ ದಕ್ಷಬ್ರಹ್ಮನ ಮಗಳು, ಶಂಕರನ ಅರ್ಧಾಂಗಿ. ಬ್ರಹ್ಮನಂತೂ 'ವಿಲಯ ಪಾಲನ ಸರ್ಗಕಾರಣ.' ಆತ್ಮಭೂ ಎನಿಸಿದ ಬ್ರಹ್ಮನಿಗೂ 'ಕಾರಣ' ನೆನಿಸಿದ 'ಅಭವ'ನಂತೂ ದೇವದೇವೋತ್ತಮ. ಇಂದ್ರನು ದೇವರಾಜ. ಮನ್ಮಥ, ರತಿ, ವಸಂತ—ಎಲ್ಲ ದೇವತೆಗಳು.

### ಉಚಿತ ವಾತಾವರಣ

ಈ ಪಾತ್ರವರ್ಗಕ್ಕೆ ಸಂಭಂದಪಟ್ಟ ಘಟನೆಗಳು ನಡೆಯುವುದಾದರೂ ಭೂಲೋಕ ದೂರವಾದ ಅಲೌಕಿಕ ಸುಂದರ ವಾತಾವರಣದಲ್ಲಿ. ಹಿಮಾಲಯವು ಭೂಲೋಕ ಭಾಗವೆನಿಸಿದರೂ ಅದು ದೇವಭೂಮಿ, ತಾಪಸೋತ್ತಮರ ನೆಲೆ

ವೀಡು, ಗಿರಿಜೆ ಮತ್ತು ಶಂಕರರ ತಪೋಭೂಮಿ. ಎರಡನೆಯ ಸರ್ಗದಲ್ಲಿ ಕವಿ ನಮ್ಮನ್ನು ಬ್ರಹ್ಮಲೋಕಕ್ಕೆ ಕರೆದೊಯ್ಯುತ್ತಾನೆ.

'ಕುಮಾರ ಸಂಭವ'ದ ಅಲೌಕಿಕ ಪ್ರಪಂಚಕ್ಕೂ ಅಲ್ಲಿ ಚರಿಸುವ ಪಾತ್ರ ವರ್ಗಕ್ಕೂ ಮತ್ತು ನಮಗೂ ಯಾವ ಸಂಬಂಧವೂ ಇಲ್ಲವೆನ್ನುವಂತಿದ್ದಿದ್ದರೆ, ಆ ಕಾವ್ಯದಿಂದ ನಮಗೆ ಈಗ ದೊರೆಯುವ ರಸಾನುಭೂತಿಯೂ ಆನಂದವೂ ಲಭಿಸುತ್ತಿರಲಿಲ್ಲವೆಂದೇ ಹೇಳಬಹುದು. 'ಕುಮಾರ ಸಂಭವ'ದಲ್ಲಿ ಕವಿಪ್ರತಿಭೆ ದೇವಲೋಕಕ್ಕೂ ಮಾನವಲೋಕಕ್ಕೂ ಒಂದು ಸುಂದರವಾದ ಸೇತುವೆಯನ್ನು ನಿರ್ಮಿಸಿದೆ; ಆದ್ದರಿಂದಲೇ ಈ ಕಾವ್ಯ ಪ್ರಪಂಚವು ನಮಗೆ ಆತ್ಮೀಯವೆನಿಸುತ್ತದೆ; ಕವಿಕಲ್ಪಿತವಾದ ಕೃತಕಪ್ರಪಂಚದಲ್ಲಿ ಯಾಂತ್ರಿಕವಾಗಿ ಚಲಿಸುತ್ತಿದ್ದಂತೆ ಭಾಸವಾಗುವುದಿಲ್ಲ. ನಮ್ಮ ಪ್ರಪಂಚದಲ್ಲಿ ಹೇಗೋ ಹಾಗೆ ಧಾರಾಳವಾಗಿ ಉಸಿರಾಡುತ್ತ; ನಮಗೆ ಪರಿಚಿತವಾದ ಪ್ರಕೃತಿ ಸೌಂದರ್ಯವನ್ನು ಸವಿಯುತ್ತ; ನಮ್ಮಂತೆಯೇ ಆಶೆ–ನಿರಾಶೆ, ಸುಖ–ದುಃಖ, ಸೋಲು–ಗೆಲವು, ರಾಗ–ವಿರಾಗ ಮೊದಲಾದ ದ್ವಂದ್ವಗಳಲ್ಲಿಯೂ, ಕಾಮ ಕ್ರೋಧ ಲೋಭಾದಿ ಅರಿಷಡ್ವರ್ಗಗಳ ವ್ಯೂಹದಲ್ಲಿಯೂ ತೊಳಲಾಡುವ, ಕಾವ್ಯದ ದೇವತಾ ಸ್ತ್ರೀ ಪುರುಷರ ಆಗು ಹೋಗುಗಳಲ್ಲಿ ಆಸಕ್ತಿವಹಿಸುತ್ತೇವೆ. ಇಂತು, ಸ್ವರ್ಗವನ್ನು ಮರ್ತ್ಯಕ್ಕೆ ತಂದು, ಮರ್ತ್ಯವನ್ನು ಸ್ವರ್ಗಕ್ಕೆ ಏರಿಸಿ, ಎರಡರ ಸುಂದರ ಸಂಮಿಶ್ರಣವನ್ನು ಸಾಧಿಸುವ ಕಾವ್ಯ ಪಾಕಕಲೆ ಕಾಳಿದಾಸನಲ್ಲಿ ಮಾತ್ರ ವಿಶಿಷ್ಟವಾಗಿರುವಂತೆ ಕಾಣುತ್ತದೆ. ಈ ಒಂದು ಅನನ್ಯ ರಮಣೀಯ ಸೃಷ್ಟಿ ಶಾಕುಂತಲದಂತೆ ಇಲ್ಲಿಯೂ ಉಂಟು.

ಹಿಮವಂತನ ಅಪೂರ್ವಪಾತ್ರ ಸೃಷ್ಟಿಯನ್ನು ಗಮನಿಸಿ: **ಹಿಮವಂತ** ವಸ್ತುತಃ ಅಚೇತನನಷ್ಟೆ. ಆದರೆ ಕಾವ್ಯದಲ್ಲಿ ಕವಿಯು ಅವನಿಗೆ ಒಂದು ವ್ಯಕ್ತಿತ್ವವನ್ನು ನೀಡಬೇಕಾಗಿದೆ. ಅವನು ಪಾರ್ವತೀ ದೇವಿಯ ಪಿತನಾಗ ತಕ್ಕವನು. ಆದ್ದರಿಂದ ಹಿಮಾಲಯನು ದೇವತಾತ್ಮನಾಗಿದ್ದಾನೆ. ರತ್ನಗಳಿಗೂ ಓಷಧಿಗಳಿಗೂ ಅವನು ಆಕರ. ಆದರೆ ಕವಿ ಹಿಮವಂತನು ಪರ್ವತ ರಾಜನೆಂಬುದನ್ನು ಮರೆಯಲಾರ. ಆದ್ದರಿಂದ ಕೆಲವು ಶ್ಲೋಕಗಳಲ್ಲಿ ಹಿಮಾಲಯ ಪರ್ವತದ ಅಪೂರ್ವ ಸುಂದರವಾದ, ಲೋಕಾತೀತವಾದ ವಾತಾವರಣದ ಕಲ್ಪನೆಯುಂಟುಮಾಡುವ ವರ್ಣನೆ ಅವನಿಂದ ಸೃಷ್ಟಿಯಾಗಿದೆ. ಪರ್ವತೇಶ್ವರನು ಗಿರಿಜೆಯ ತಂದೆಯೂ ಹೌದು. ಅವನಿಗೆ ಗಿರಿಜೆಯಲ್ಲಿ ಪಕ್ಷಪಾತ. 'ಪುತ್ರವತೋಽಪಿ' ಭಾವಿಸುತ್ತಿದ್ದನು. ಗಿರಿಜೆ ಈಶ್ವರನ ವಧುವೆಂದು ನಾರದ ನುಡಿದರೂ

ಅಭಿಮಾನಧನನಾದ ಅವನು ತಾನಾಗಿ ಮದುವೆಯ ವಿಚಾರದಲ್ಲಿ ಮುಂದು ವರಿಯಲಾರನು. ಆದರೆ ನಾರದ ವಾಕ್ಯದಲ್ಲಿ ನಂಬಿಕೆಯೂ ಉಂಟು; ಆದ್ದರಿಂದ ಅವನು ತಾನೆ ಮಗಳನ್ನು ಈಶ್ವರಾರಾಧನೆಗೆ ನೇಮಿಸುವನು. ಈಶ್ವರನಿಂದ ತಿರಸ್ಕೃತಳಾದ ಗಿರಿಜೆಯನ್ನು ಪ್ರೀತಿಯಿಂದ ಮನೆಗೆ ಹಿಂತಿರುಗಿ ಕರೆದುಕೊಂಡು ಬರುವನು. ಗಿರಿಜೆಯು ಈಶ್ವರನನ್ನು ಕುರಿತು ತಪಸ್ಸು ಮಾಡಬೇಕೆಂದು ತಂದೆಯ ಅನುಮತಿಯನ್ನು ಕೇಳಿದಾಗ ಅವನು ಮೇನೆಯಂತೆ ಅಡ್ಡಿಪಡಿಸದೆ ಸಂತೋಷದಿಂದ ಅನುಮತಿ ಕೊಡುವನು. ಹಿಮಾಚಲದ ಔನ್ನತ್ಯಕ್ಕೆ ತಕ್ಕಂತೆ, ಹಿಮವಂತನ ಪಾತ್ರ ಕಿರಿದಾದರೂ ಭವ್ಯವಾಗಿದೆ.

**ಮೇನಾದೇವಿ** ಹಿಮವಂತನಿಗೆ ಅನುರೂಪಳು; ಮುನಿ ಮಾನನೀಯೆ; ಅಮರ್ತ್ಯ ಜನ್ಮ ಉಳ್ಳವಳು.(ಪಿತೃಮನೋಜನ್ಯೆ). ಗಿರಿಜೆಯನ್ನು ಈಶ್ವರಾರ್ಚನೆಗೆ ನೇಮಿಸಿದ ಪ್ರಸಂಗದಲ್ಲಿ ಅವಳ ಪಾತ್ರ ಕಾಣಬರದು. ಕಾರಣ ಅವಳು ಪತಿಯ ಇಚ್ಛಾನುಸಾರಿಣಿ. ಗಿರಿಜೆ ತಪಸ್ಸು ಮಾಡಲು ಮೊದಲು ತಾಯಿಯ ಅನುಮತಿ ಬೇಡುವಳು. ಆ ಸಂದರ್ಭದಲ್ಲಿ ಮೇನೆಯ ಮೃದುವಾದ ಮಾತೃಹೃದಯ ವ್ಯಕ್ತ ಪಟ್ಟಿದೆ. ಮಗಳನ್ನು ಎದೆಗಪ್ಪಿಕೊಂಡು, ಕಠಿಣವಾದ ತಪಸ್ಸು ಅವಳ ಕೋಮಲ ಶರೀರಕ್ಕೆ ಮೀರಿದ್ದೆಂದು ತಿಳಿಯ ಹೇಳುವಳು. ಆದರೆ ಆ ಧ್ರುವೇಚ್ಛೆಯ ಸುತೆಯ ಉದ್ಯಮವನ್ನು ತಡೆಯದಾದಳು ಮೇನೆ; ಮೂರು ಮಾತಿನಲ್ಲೊಂದು ಮಾತೆಯ ಚಿತ್ರ. ಇದಲ್ಲವೆ ಕವಿ ಪ್ರತಿಭೆ.

ಹಿಮವಂತ ಮೇನೆಯರ ಮಾತು ಇರಲಿ. 'ಪರಕೆ ಪರತತ್ವ'ನೆನಿಸಿದ **ಬ್ರಹ್ಮ**ನನ್ನು ಕೂಡ ಮಾನವೀಯ ದೃಷ್ಟಿಯಿಂದ ಚಿತ್ರಿಸಿದ್ದಾನೆ ಕಾಳಿದಾಸ. ಬ್ರಹ್ಮನು ಸರ್ವಜ್ಞನಾದರೂ ಕೂಡ, ಏನೂ ಅರಿಯದವನಂತೆ ದೇವತೆಗಳು ತನ್ನ ಬಳಿಗೆ ಬಂದ ಕಾರಣವನ್ನು ಬೆಸಗೊಳ್ಳುತ್ತಾನೆ; ಅವರನ್ನು 'ವತ್ಸಾಃ' (ಕಂದರಿರಾ) ಎಂದು ಪಿತೃ ವಾತ್ಸಲ್ಯದಿಂದ ಸಂಬೋಧಿಸುತ್ತಾನೆ. ದೇವತೆಗಳು ತಾರಕನ ಕೋಟಲೆಯನ್ನು ಬಣ್ಣಿಸಿ ಬ್ರಹ್ಮನ ನೆರವನ್ನು ಕೋರಿದಾಗ, "ನನ್ನಿಂದ ವರ್ಧಿಸಿದ ದೈತ್ಯನನು ನಾನೆ ಸಂಹರಿಸಲೆಂತಹುದು, ವಿಷವೃಕ್ಷವಾದರುಂ ತಾನೆ ಬೆಳಸಿರ್ದುದನು ಕಡಿಯುವುದು ತಗದು" ಎಂದ ಬ್ರಹ್ಮ ವಚನದಲ್ಲಿ ಎಂಥ ಕಾರುಣ್ಯ ತುಂಬಿದೆ!

ಇನ್ನು **ದೇವತೆಗಳು:** ಅವರ ಚಿತ್ರಣದಲ್ಲಿಯೂ, ಹಮ್ಮುಬಿಮ್ಮು, ಹಿಗ್ಗು ಕುಗ್ಗು, ಸೋಲು ಗೆಲುವು, ನೋವು ನಲಿವು ಮೊದಲಾದ ಮಾನವ ಸಹಜ

ವಾದ ರಾಗ ಭಾವಗಳೆಲ್ಲ ಬಣ್ಣ ತಳೆದಿವೆ. ತಾರಕನ ಉಪಟಳದಿಂದ ಪದಚ್ಯುತರಾಗಿ, ಭಗ್ನಾಯುಧರಾಗಿ ಬ್ರಹ್ಮನ ಮುಂದೆ ತಲೆ ತಗ್ಗಿಸಿ ನಿಂತಿರುವ ಅವರ ಸ್ಥಿತಿ ಕರುಣಾಜನಕವಲ್ಲವೆ? ದೇವನಿಯೋಗದ ಮುಂದಾಳಾಗಿ ಬಂದ **ಇಂದ್ರನು**, ಮಾತಾಡಬೇಕಾಗಿ ಬಂದಾಗ, ಗುರುವನ್ನು ಮುಂದೆ ಬಿಡುತ್ತಾನೆ. ಲಜ್ಜೆ, ಪಾಪ! ಬ್ರಹ್ಮನು ಉಪಾಯ ಸೂಚಿಸಿದ ಮೇಲೆ ಉತ್ಸಾಹಗೊಂಡ. ದೇವತೆಗಳ ಕಾರ್ಯಕ್ಕೆ ಮನ್ಮಥನನ್ನು ಕೇಳಿಕೊಳ್ಳುವ ಪ್ರಸಂಗದಲ್ಲಿ ಇಂದ್ರನ ಸಮಯೋಪಾಯ ಕೌಶಲ ಚೆನ್ನಾಗಿ ವ್ಯಕ್ತಪಟ್ಟಿದೆ. ಇಂದ್ರನು ಮನ್ಮಥನಿಗೆ ತೋರುವ ಪಕ್ಷಪಾತದ ಅಭಿಮಾನ ಸ್ವಪ್ರಯೋಜನವನ್ನು ಬಯಸುವ ಪ್ರಭುಗಳ ನಡೆವಳಿಗೆ ಚೆನ್ನಾಗಿ ಕನ್ನಡಿ ಹಿಡಿದಿದೆ. ಆಶ್ರಿತನಾದರೂ ಮನ್ಮಥನಿಗೆ ಪಕ್ಕದ ಪೀಠಕೊಡುವುದು, ಅವನನ್ನು ಹೊಗಳಿ ಆವನ ಬೆನ್ನು ತಟ್ಟುವುದು–ಕಾರ್ಯವಾಸಿಯ ಲಕ್ಷಣಗಳಿವು. **ಮದನನ** ಮಾತುಗಳಲ್ಲಿ ಸ್ವಪ್ರತಾಪದ ಮದ ಚೆನ್ನಾಗಿ ಮೂಡಿದೆ. ಕಂದರ್ಪನ ದರ್ಪ ಭಂಗವಾಗಲೇಬೇಕಾಗಿರುವುದರಿಂದ, ಆ ದರ್ಪ ವರ್ಣನೆ ಅವಶ್ಯವಾಗಿದೆ. ಸೊಕ್ಕೇರಿದ ಯೌವ್ವನದ ಮೂರ್ತಿ ಮದನ. ರತಿ ವಿಲಾಪ ಪ್ರಕರಣದಲ್ಲಿ, ರತಿಯ ಮನಃ ಪ್ರಿಯನಾಗಿ, ವಸಂತನ ಸ್ನೇಹದ ಮೂರ್ತಿಯಾಗಿ ಮೆರೆಯುತ್ತಾನೆ; ದೇವಕಾರ್ಯಕ್ಕಾಗಿ ಮಡಿದ ಮದನನ ಬಗೆಗೆ ರತಿಯ ಶೋಕದಲ್ಲಿ ನಾವೂ ಪಾಲುಗೊಳ್ಳುತ್ತೇವೆ. ಅವನ ಪಾತ್ರ ಪರಿಣಾಮದಲ್ಲಿ ದುರಂತಚ್ಛಾಯೆಯಿಂದ ಕೂಡಿದೆ. **ರತಿದೇವಿ** ಪತಿವ್ರತೆಯೆನ್ನುವುದರಲ್ಲಿ ಸಂದೇಹವಿಲ್ಲ. ಈಶ್ವರನ ತಪಸ್ಸನ್ನು ಆಕ್ರಮಿಸಲು ಹೊರಟ ಪತಿಯನ್ನು ತಾನೂ ಹಿಂಬಾಲಿಸುತ್ತಾಳೆ. ಪತಿಯ ಸದ್ಗುಣಗಳನ್ನು ನೆನೆನೆನೆದು ಹಲಬುತ್ತಾಳೆ. ತನಗಾಗಿರುವ ಭೋಗ ನಷ್ಟಕ್ಕಾಗಿಯೂ ಶೋಕಿಸುತ್ತಾಳೆ. ಅವಳು ಪತಿಯೊಡನೆ ಸಹಗಮನ ಮಾಡಲು ನಿಶ್ಚಯಿಸಿರುವುದರಿಂದ, ಇದು ಸ್ವಾರ್ಥ ದೃಷ್ಟಿಯಾಗಿ ಕಾಣುವುದಿಲ್ಲ. ಎಷ್ಟೇ ಪತಿವ್ರತೆಯೆನಿಸಿದರೂ, ಮನೋದೌರ್ಬಲ್ಯವುಳ್ಳ ಸರ್ವಸಾಮಾನ್ಯ ಸ್ತ್ರೀಯಾಗಿ ಕಾಣುತ್ತಾಳೆ ರತಿ. ಸ್ಥಿರಚಿತ್ತ್ರವ ಗೌರೀ ದೇವಿಯ ಉದಾತ್ತತೆಯನ್ನು ಎತ್ತಿ ತೋರುವ ಉಚಿತ ಹಿನ್ನಲೆಯಾಗಿದೆ ರತಿಯ ಸಹಜ ಸಾಮಾನ್ಯತೆ.

## ಗಿರಿಜಾ–ಶಂಕರರು

'ಕುಮಾರಸಂಭವ'ದ ಅತ್ಯಂತ ಪ್ರಮುಖ ಹಾಗೂ ಮನೋಹರ ಪಾತ್ರಗಳೆಂದರೆ ಗಿರಿಜಾ–ಶಂಕರರೆಂದು ಒತ್ತಿ ಹೇಳಲೇಬೇಕಾಗಿಲ್ಲ. ಅವರೆ ಕಾವ್ಯದ

ನಾಯಕ ನಾಯಿಕೆಯರು. (ಕಾಳಿದಾಸನಿಗೇನೊ ' ಪಾರ್ವತಿ–ಪರಮೇಶ್ವರ 'ರೆಂಬ ಹೆಸರುಗಳು ಪ್ರಿಯವೆಂದು ಕಾಣುತ್ತದೆ. ' ರಘುವಂಶ 'ದ ಮೊದಲ ಶ್ಲೋಕದಲ್ಲಿ ' ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ ' ಎಂದು ಸ್ತುತಿಸಿರುವನು.)

ಗಿರಿಜೆ ಹಿಂದಣ ಜನ್ಮದಲ್ಲಿ ಸತೀದೇವಿ ; ಶಂಕರನ ಮೊದಲ ಸತಿ ; ತಂದೆಯಾದ ದಕ್ಷಬ್ರಹ್ಮನಿಂದ ತನಗೂ ತನ್ನ ಪತಿಗೂ ಆದ ಅಪಮಾನವನ್ನು ಸಹಿಸಲಾರದೆ " ಯೋಗದಿಂದೊಡಲಳಿದು ಮತ್ತೆ ಜನಿಯಿಸಲೆಂಧು ಶೈಲವಧು ಮೇನೆಯನು ಸಾರ್ದಳೆಂದು." ಆದ್ದರಿಂದ ಗಿರಿಜೆಯ ಜನ್ಮ, ಬಾಲ್ಯ ಮೊದಲಾದ ಅವಳ ಸಕಲ ಜೀವಿತ ವ್ಯಾಪಾರಗಳಲ್ಲಿಯೂ ಕವಿ ದೈವೀಸಂಪತ್ತು ಸ್ಫುರಿಸುವಂತೆ ಮಾಡಿದ್ದಾನೆ. ಆದರೂ ಆ ದೇವಕನ್ಯೆ ಕವಿಕಲ್ಪನೆಯಲ್ಲಿ ಮಧುರ ಮಾನವೀಯ ಗುಣಗಳಿಂದ ಶೋಭಿಸುವ ಮಾನಿನಿಯೂ ಹೌದು. ಅವಳು ಹುಟ್ಟಿದಾಗ ದಶದಿಕ್ಕುಗಳೂ ಬೆಳಗಿದುವು ; ಗಾಳಿ ನಿರ್ಮಲವಾಯಿತು ; ಅವಳು ಹುಟ್ಟಿದ ದಿನ ಸಕಲ ಲೋಕಕ್ಕೂ ಸುಖಪ್ರಾಪ್ತಿ. ಬಾಲ್ಯದಲ್ಲಿಯೇ ಇವಳಿಗೆ ತಪಸ್ಸಿನ ಆಸಕ್ತಿ. ಅದನ್ನು ಮೇನೆ (ನೀನು ತಪಸ್ಸು ಮಾಡಬೇಡ=ಉಮಾ) ಬಿಡಿಸಿದ್ದರಿಂದ ಅವಳ ಹೆಸರು ಉಮೆ ಎಂದಾಯಿತಂತೆ. ಇಂಥ ಮಗಳನ್ನು ಪಡೆದ ತಂದೆ " ಪೂತನು ವಿಭೂಷಿತನು " ಆದದ್ದರಲ್ಲಿ ಆಶ್ಚರ್ಯವೇನು ?

ಕಾಳಿದಾಸನು ಯೌವ್ವನವತಿಯಾದ ಉಮೆಯ ಸೌಂದರ್ಯವನ್ನು ಅಡಿಯಿಂದ ಮುಡಿಯವರೆಗೂ ವರ್ಣಿಸಿದ್ದಾನೆ. ಅವಳು ಮುಂದೆ ಕೆಲವು ಕಾಲ ಮದನನ ಕೈಯ ಆಯುಧವಾಗಿ ಮೆರೆಯತಕ್ಕವಳು. ಆದ್ದರಿಂದ ಆ ಲಾವಣ್ಯಮೂರ್ತಿಯನ್ನು ಕಾಳಿದಾಸನು ತುಸ ಹೆಚ್ಚೆನ್ನಬಹುದಾದ ರಸಿಕ ದೃಷ್ಟಿಯಿಂದ ವರ್ಣಿಸಿದ್ದರೂ ಗಿರಿಜಾ ಪಾತ್ರದ ಸಮಷ್ಟಿ ದೃಷ್ಟಿಯಲ್ಲಿ ಆ ವರ್ಣನೆ ಉಚಿತವೂ ಅವಶ್ಯವೂ ಆಗಿದೆ ಒಂದು ಮಾತಿನಲ್ಲಿ, ಗಿರಿಜೆ ಸೌಂದರ್ಯದ ಪುತ್ಥಳಿ : ' ಸರ್ವೋಪಮಾದ್ರವ್ಯ ಸಮುಚ್ಚಯ 'ವನ್ನು ' ಏಕಸ್ಥ ಸೌಂದರ್ಯ 'ವಾಗಿ ನೋಡಲೆಳಸಿದ ಸೃಷ್ಟಿಕರ್ತನು ಬಹು ಪ್ರಯತ್ನದಿಂದ ಅವಳನ್ನು ನಿರ್ಮಿಸಿದ್ದನು.

ಆದರೆ, ನಿಜವಾದ ಪ್ರೇಮವು ಬಾಹ್ಯಸೌಂದರ್ಯವನ್ನು ಅವಲಂಬಿಸಿರತಕ್ಕದ್ದಲ್ಲ. ಬಾಹ್ಯ ಸೌಂದರ್ಯವು ಕಾಮುಕತೆಯನ್ನು ಕೆರಳಿಸುವುದೇ ಹೊರತು ಪ್ರೇಮವನ್ನು ವರ್ಧಿಸಲಾರದು. ಪ್ರೇಮವೆಂದರೆ ಎರಡು ಹೃದಯಗಳು, ಎರಡು ಆತ್ಮಗಳು, ಸಮತಾನದಲ್ಲಿ ಮಿಡಿದು, ನುಡಿದು, ಬೆರೆಯತಕ್ಕದ್ದು. ತಾನು ಸೇರ ಬಯಸುವ ಒಂದು ಆತ್ಮಕ್ಕಾಗಿ ಇನ್ನೊಂದು ಆತ್ಮ ಹಂಬಲಿಸಬೇಕು, ಹಾತೊರೆಯ

ಬೇಕು. ಸರ್ವ ತ್ಯಾಗಕ್ಕೂ ಸಿದ್ಧವಾಗಿರಬೇಕು. ಈ ಒಂದು ಉದಾತ್ತವಾದ ಪ್ರೇಮದರ್ಶನವನ್ನು ಕಾಳಿದಾಸನು ಗಿರಿಜಾಪಾತ್ರ ಕಲ್ಪನೆಯಲ್ಲಿ ಮಾನವ ಕೋಟಿಯ ಚಿರಕಾಲಿಕ ಆದರ್ಶವಾಗಿ ನಮ್ಮ ಮುಂದಿಟ್ಟಿದ್ದಾನೆ.

ಶಂಕರನ ಅರ್ಧಾಂಗಿಯಾಗಲಿರುವ ಉಮೆಯನ್ನು ತಂದೆ ಹಿಮವಂತನೇ ಅವನನ್ನು ಆರಾಧಿಸಿ ಒಲಿಸಿಕೊಳ್ಳಲೆಂದು ಅವನ ಸಮ್ಮುಖಕ್ಕೆ ಕರೆದೊಯ್ಯುತ್ತಾನೆ. ಪಾರ್ವತಿಯು ಗ್ರಿರಿಶನನ್ನು ಮನಸಾರೆ ಅರ್ಚಿಸುತ್ತಾಳೆ. ಆದರೆ ಈಶ್ವರನು ಅವಳ ಬಾಹ್ಯಪೂಜೆಗೆ ಮನಸೋಲುವ ಮಾನವಮೂರ್ತಿಯಲ್ಲ. ಅವನು ಅಂತರ್ಮುಖಿಯಾಗಿ ಆತ್ಮಧ್ಯಾನದಲ್ಲಿ ಮುಳುಗಿದ್ದಾನೆ. ಗಿರಿಜೆ ಅವನ ಅರ್ಚನೆಯಲ್ಲಿರುವಾಗ ಅವಳಿಗೆ ಮದನ ವಸಂತರ ನೆರವು ದೊರಕುತ್ತದೆ; ಅಥವಾ ಗಿರಿಜೆಯ ಬೆಂಬಲ ಮದನನಿಗೆ ಲಭಿಸಿತೆಂದರೂ ಸರಿಯೆ. ಮರ್ತ್ಯ ಪ್ರಪಂಚದಲ್ಲಿ ಕಾಮ–ಸೌಂದರ್ಯಗಳು ಪರಸ್ಪರ ಸಹಕಾರಿಗಳಷ್ಟೆ. ರತಿಯನ್ನೂ ಲಜ್ಜೆಗೀಡು ಮಾಡುವ ಸರ್ವಾವಯವ ಸುಂದರಿಯಾದ ಪಾರ್ವತಿಯನ್ನು ನೋಡಿದ ಮೇಲೆ ಮನ್ಮಥನಿಗೆ ಸ್ವಕಾರ್ಯ ಸಿದ್ಧಿಯ ಪುನರಪೇಕ್ಷೆಯುಂಟಾಯಿತಂತೆ. ಈಗ ವಾಸ್ತವವಾಗಿ ಅವಳು ಮದನಾಸ್ತ್ರ. ಮದನ ಪ್ರಭಾವದಿಂದ ಕಿಂಚಿತ್ ಚಂಚಲನಾದ ಈಶ್ವರನು ಕಣ್ಣು ತೆರೆದಾಗ, ಮೊದಲು ಕಣ್ಣಿಗೆ ಬಿದ್ದವನು ಮನ್ಮಥ; ಅವನ ದಹನವಾಯಿತು. ಆಮೇಲೆ ಕಣ್ಣಿಗೆ ಬಿದ್ದವಳು ಚೆಲುವೆ ಪಾರ್ವತಿ. ಆದರೆ ಯೋಗಿನಾಂ ಪತಿಯಾದ ಭೂತಪತಿ ಲೋಕಮೋಹಕ ಸೌಂದರ್ಯವನ್ನು ಕಣ್ಣೆತ್ತಿಯೂ ನೋಡದೆ, 'ಸ್ತ್ರೀ ಸನ್ನಿಕರ್ಷ'ವನ್ನು ಪರಿಹರಿಸಲೆಳಸಿ, ಹೊರಟು ಹೋದನು.

ಪ್ರಣಯಿನಿಯಾದ ಗಿರಿಜೆ ನಿರಾಶೆಯಿಂದ ನೊಂದು, ಪಿತನ ಮನೆಗೆ ಹಿಂದಿರುಗಿದಳು. ಪ್ರಣಯದ ಉನ್ಮಾದ ಅವಳನ್ನು ಬಹುಕಾಲ ಕಾಡಿರಬೇಕು. ವಿರಹದಿಂದ ನೊಂದ ಬೆಂದ ವಿರಹಿಣಿ ಪಾರ್ವತಿಯ ಚಿತ್ರವು ವಟುವಿಗೆ ಸಖಿ ಹೇಳುವ ಮಾತುಗಳಲ್ಲಿ ಸುಂದರವಾಗಿ ಮೂಡಿದೆ. ವಿರಹವೂ ಒಂದು ಬಗೆಯ ತಪಸ್ಸೆ. ವಿರಹವೂ ಕಾಮವನ್ನು ಸುಟ್ಟು ಮಾನವನನ್ನು ಪ್ರೇಮದ ಮೇಲ್ ನೆಲೆಗೆ ಮುಟ್ಟಿಸಬಹುದು. ಇದು ಮಾನವರ ಮಾತು. ಶಿವನು ಬರಿಯ ವಿರಹದ ಕೂಗಿಗೆ ಓಗೊಡತಕ್ಕವನಲ್ಲ. ಸತ್ವವನ್ನು ಸತ್ವದಿಂದಲೇ ಗೆಲ್ಲಬೇಕು. ಗಿರಿಜೆಗೆ ಇದರ ಅರಿವಾಯಿತು. ತನ್ನ ಚೆಲುವನ್ನು ನಿಂದಿಸಿಕೊಂಡಳು. ತಪಸ್ಸಿನಿಂದಲೆ ತಪೋಮೂರ್ತಿಯನ್ನು ಗೆಲ್ಲಬಯಸಿ ತಪಸ್ವಿನಿಯಾದಳು. ಹೀಗೆ

ಪ್ರಣಯಿನಿಯಾದ ಗಿರಿಜೆ ತಪಸ್ವಿನಿಯಾಗಿ ಪರಿವರ್ತನೆಯಾದುದೇ ಗಿರಿಜಾ ಪಾತ್ರ ಕಲ್ಪನೆಯ ಜೀವಜೀವಾಳ. ಪ್ರಣಯಿನಿಯನ್ನು ತಿರಸ್ಕರಿಸಿದ ಶಿವನು ತಪಸ್ವಿನಿಯನ್ನು ತಾನಾಗಿ ಬಂದು ಕೈಹಿಡಿದನು. ಕಾಮ ಸುಟ್ಟು ಪ್ರೇಮ ಬೆಳೆಯಿತು. ಸಾತ್ವಿಕ ಪ್ರೇಮಮೂರ್ತಿಯಾದ ಗಿರಿಜೆ ಶಂಕರನ ಅರ್ಧಾಂಗಿಯಾದಳು.

**ಶಂಕರನು** 'ಕುಮಾರಸಂಭವ'ದ ನಾಯಕ, ಧೀರೋದಾತ್ತ ನಾಯಕ ಮಾತ್ರನಲ್ಲ, ಕಾಳಿದಾಸನ ಇಷ್ಟದೈವ. ಆದ್ದರಿಂದ ಶಿವನನ್ನು ವರ್ಣಿಸುವ ಸಂದರ್ಭಗಳಲ್ಲೆಲ್ಲಾ ಕಾಳಿದಾಸನು ಅವನನ್ನು ವೈರಾಗ್ಯ ಶಿಖಾಮಣಿಯನ್ನಾಗಿ, ಪರಮ ತಪೋಮೂರ್ತಿಯಾಗಿ, ಆದರೂ ಅಭಿಮಾನಧನನಾಗಿ ಚಿತ್ರಿಸಿದ್ದಾನೆ. ದಕ್ಷನಿಂದ ಅಪಮಾನಗೊಂಡು ಸತಿ ಒಡಲನ್ನು ನೀಗಲು ಅವನು ಕನಲಿ ನೊಂದು ಸರ್ವಸಂಗವಿರಾಗಿಯಾಗಿ ಭಾರ್ಯಾ ವಿಯೋಗಿಯಾಗಿ ಹಿಮಗಿರಿಯ ತಪ್ಪಲನ್ನು ಸೇರಿ. ಆವುದೋ ಕಾಮದಲ್ಲಿ ತಪವಿದ್ದನು. ಬ್ರಹ್ಮನ ಸ್ತೋತ್ರ ಸಂದರ್ಭದಲ್ಲಿ ಕವಿ ಅವನನ್ನು ಸೃಷ್ಟಿಪೂರ್ವದ ಆತ್ಮನೆಂದೂ ಪರಮ ಪುರುಷನೆಂದೂ ವರ್ಣಿಸಿದ್ದರೂ ಮುಂದೆ, ಆ ಬ್ರಹ್ಮನಿಗೂ ಶಿವನು 'ಮೂಲಕಾರಣ'ನೆಂಬ ಮಾತನ್ನು ಗಿರಿಜೆಯ ಬಾಯಲ್ಲಿ ಹಾಕಿದ್ದಾನೆ. ಇದರಿಂದ ಶಿವನಲ್ಲಿ ಕವಿಯ ಪವಿತ್ರ ಪ್ರವಣತೆ, ನಚ್ಚಿನ ಒಲವು ಗೊತ್ತಾಗುತ್ತದೆ.

ಕಾವ್ಯದಲ್ಲಿ ಎರಡು ಸಂದರ್ಭಗಳಲ್ಲಿ ತಪೋಮೂರ್ತಿಯಾದ ಶಿವನ ಭವ್ಯ ವರ್ಣನೆ ಬರುತ್ತದೆ. 'ಅನಿಲನ ಆಂದೋಲವಿರದ ಅಸ್ಖಲಿತ ಶಿಖಿಯಂತೆ' ಆ ತಪೋಮೂರ್ತಿ. ಆದರೆ ಈ ಶಿಖಿ ಮನ್ಮಥನನ್ನು ಸುಟ್ಟ ಮಹಾ ಜ್ವಾಲೆಯಾಗಿ ಪರಿಣಮಿಸುತ್ತದೆ. ಶಾಂತಮೂರ್ತಿ ರುದ್ರನಾಗುತ್ತಾನೆ. ಆದರೆ ಮತ್ತೆ ಭದ್ರನಾಗುತ್ತಾನೆ. ಮಂಗಳಾಕಾರನಾದ ವಟುವಾಗಿ ಬಂದು ಉಮಾಪತಿಯಾಗುತ್ತಾನೆ. ವಟುವೇಷದ ಶಂಕರ ದೇವಮೂರ್ತಿಯಲ್ಲ, ಹಾಸ್ಯಪ್ರಿಯನಾದ ಚತುರೋಕ್ತಿ ಪಂಡಿತನಾದ ಮಾನವಮೂರ್ತಿ. ದೇವದೇವೋತ್ತಮನಾದ ಪರಮೇಶ್ವರನು ವಟುವೇಷಧಾರಿಯಾಗಿ ನಟಿಸಿರುವ ಮಾನವ ಪಾತ್ರ ಬಹು ಮನೋಜ್ಞ. ದೇವನನ್ನು ಮಾನವನನ್ನಾಗಿಮಾಡುವ, ಮಾನವನನ್ನು ದೇವನನ್ನಾಗಿ ಮಾಡುವ ಕವಿಯ ಪವಾಡ ಶಕ್ತಿಗೆ ಸುಂದರ ನಿದರ್ಶನ.

## ಉಪಸಂಹಾರ

'ಕುಮಾರಸಂಭವ'ದ ಸ್ವಾರಸ್ಯ ಸನ್ನಿವೇಶಗಳು, ಸಂವಾದಗಳು, ಪಾತ್ರಗಳು—ಇವುಗಳ ಪರಿಚಯ, ಈವರೆಗಿನ ಸಮಾಲೋಚನೆಯಿಂದ ತಕ್ಕಮಟ್ಟಿಗೆ ಆಗಿದ್ದೀತು. ಇವಿಷ್ಟೇ ಕಾವ್ಯದ ಸಾರ ಸರ್ವಸ್ವವಲ್ಲ. ಕಾವ್ಯ ಸೌಂದರ್ಯದ ಬಹುಪಾಲು ಅದರ ವರ್ಣನೆಗಳಲ್ಲಿ ನೆಲೆಸಿದೆ. ಹಿಮಾಲಯದ ವರ್ಣನೆ, ಅಕಾಲ ವಸಂತದ ವರ್ಣನೆ, ಗಿರಿಜೆಯ ಸೌಂದರ್ಯ ವರ್ಣನೆ, ತಪೋನಿಷ್ಠ ಈಶ್ವರನ ಭವ್ಯಸ್ವರೂಪದ ವರ್ಣನೆ, ಗಿರಿಜೆಯು ತಪಸ್ಸಿನ ವರ್ಣನೆ—ಇವೆಲ್ಲ ಕಾವ್ಯಕಮಲದ ಇತರ ಎಸಳುಗಳು. ಈ ಕಮಲದ ಸೌರಭ ಸೂಸುತ್ತಿರುವುದು, ಕಾವ್ಯದಲ್ಲಿ ತುಂಬಿರುವ ನೂರಾರು ಉಪಮೆಗಳಲ್ಲಿ. 'ಉಪಮಾ ಕಾಳಿದಾಸಸ್ಯ' ತಾನೆ! ಹೀಗಿರುವಾಗ, ಈ ಸಮಾಲೋಚನೆ ಬಹು ಅಸಮಗ್ರ ಎಂದು ಹೇಳಲೇಬೇಕಾಗಿಲ್ಲ. ಈ ಅಸಮಗ್ರತೆಯನ್ನು ಪರಿಪೂರ್ಣಗೊಳಿಸುವ ಸದವಕಾಶವನ್ನು ಯಾವ ಲೇಖಕನು ತಾನೆ ಮತ್ತೆ ಬಯಸನು?

ಕಡೆಯದಾಗಿ ಒಂದು ಮಾತು: 'ಕುಮಾರಸಂಭವ'ದ ಕನ್ನಡ ಅನುವಾದವನ್ನು ಲಲಿತಶೈಲಿಯಲ್ಲಿ ಒದಗಿಸಿಕೊಟ್ಟ ಶ್ರೀ ಎಸ್. ವಿ. ಪರಮೇಶ್ವರ ಭಟ್ಟರು ಕನ್ನಡಿಗರ ಕೃತಜ್ಞತೆಗೆ ಪಾತ್ರರು.

## ೪

## 'ಕುಮಾರ ಸಂಭವ'ದ ಸುಭಾಷಿತಗಳು

[ಸುಭಾಷಿತ ಎಂದರೆ ಒಳ್ಳೆಯ ಮಾತು, ನಲ್ನುಡಿ. ಪ್ರತಿಯೊಂದೂ ಕವಿಯ ಅನುಭವಾಮೃತವನ್ನುಳ್ಳದ್ದು. ಜೀವನ ಮಾರ್ಗದ ಹಗಲಿನಲ್ಲಿ ಮರದ ನೆರಳು, ಇರುಳಿನಲ್ಲಿ ಕೈದೀವಿಗೆ–ಈ ಕವಿಸೂಕ್ತಿಗಳು. ಆದ್ದರಿಂದ ಸ್ಮರಣಯೋಗ್ಯ; ಮನನಯೋಗ್ಯ.]

೧–೩. ಹಲವು ಗುಣ ಮರೆಯಿಸದೆ ತನ್ನೊಂದು ದೋಷವನು
ಶಶಿಕಿರಣ ಮರೆಸುವೊಲು ಕಲೆಯೊಂದನು.

(ಏಕೋ ಹಿ ದೋಷೋ ಗುಣಸಂನಿಪಾತೇ ನಿಮಜ್ಜತೀಂದೋಃ
ಕಿರಣೇಷ್ವಿವಾಂಕಃ)

[ಚಂದ್ರನ ಕಿರಣಗಳ ನಡುವೆ ಅವನ ಒಂದು ಕಳಂಕವು ಹೇಗೆ ಗಮನಕ್ಕೆ ಬರುವುದಿಲ್ಲವೊ ಅದೇ ರೀತಿ ಹಲವು ಗುಣಗಳ ಮೊತ್ತದಲ್ಲಿ ಒಂದು ದೋಷ

ಮರೆಯಾಗಿ ಹೋಗುತ್ತದೆ. ಹಿಮಾಲಯ ಮಂಜಿನಿಂದ ಮುಸುಕಿದ್ದರೇನು ? ಅನಂತ ರತ್ನಗಳ ಗಣಿ ಅವನು.]

೧-೧೨. ಉನ್ನತರು ಮರೆಹೊಕ್ಕ ಸಜ್ಜನರನೆಂತಂತೆ
ಅಲ್ಪರನುಮಾದರದೆ ಪೊರೆವರಲ್ತೆ.

(ಕ್ಷುದ್ರೇऽಪಿ ನೂನಂ ಶರಣಂ ಪ್ರಪನ್ನೇ ಮಮತ್ವಮುಚ್ಚೈಃ
ಶಿರಸಾಂ ಸತೀವ)

[ಹಿಮಾಲಯ ವರ್ಣನೆ : ಹಗಲಿಗೆ ಅಂಜಿ ಕತ್ತಲೆ ಪರ್ವತದ ಗುಹೆಯಲ್ಲಿ ಅಡಗಿ ಅವಿತುಕೊಳ್ಳಲು, ಕತ್ತಲೆಯ ಶತ್ರುವಾದ ಸೂರ್ಯನು ಅದರ ಬಳಿಗೆ ಬರದಂತೆ ಅದನ್ನು ಪರ್ವತವು ಕಾಪಾಡುತ್ತಿತ್ತು. ಕತ್ತಲೆ ಕ್ಷುದ್ರವಾದದ್ದೆ. ಆದರೆ, ಎಷ್ಟೇ ಕ್ಷುದ್ರರಾದರೂ ಶರಣಾಗತರಾದ ಅವರನ್ನು ಸಜ್ಜನರನ್ನು ಹೇಗೋ ಹಾಗೆ ಕಾಪಾಡುವುದು ಉದಾತ್ತರ ಸ್ವಭಾವ. ಹಿಮಾಲಯ ಶರಣಾಗತ ರಕ್ಷಕ.]

೧-೫೨. ಬೇಡಿಕೆಯ ಭಂಗದಿಂದಳುಕುತಿಹ ಸಜ್ಜನರು
ತಮ್ಮೊಲವಿನಭಿಮತವನರಿಯುಗೊಡರು.

(ಅಭ್ಯರ್ಥನಾಭಂಗ ಭಯೇನ ಸಾಧುರ್ಮಾಧ್ಯಸ್ಥ್ಯಮಿಷ್ಟೇऽ
ಪ್ಯವಲಂಬತೇऽರ್ಥೇ)

[ಗಿರಿಜೆ ಈಶ್ವರನ ಅರ್ಧಾಂಗಿಯಾಗುವಳೆಂದು ನಾರದ ಹೇಳಲು, ಮಗಳಿಗೆ ಬೇರೆ ವರರನ್ನು ನೋಡುವ ಆಶೆಯನ್ನೇನೋ ಹಿಮವಂತನು ಬಿಟ್ಟನು. ಆದರೆ, ಈಶ್ವರನು ಕನ್ಯಾರ್ಥಿಯಾಗಿ ಬಾರದಿರಲು, ಹಿಮವಂತನು ಹೇಗೆ ತಾನೆ ಮಗಳನ್ನು ಕೊಡಹೋಗುವನು ? ಅವನಿಗೆ ಪ್ರತಿಷ್ಠೆ ಎಂದಲ್ಲ. ಕೇಳಿದರೆ ಈಶ್ವರನು ಒಪ್ಪುವನೋ ಇಲ್ಲವೋ ಎಂದು ಅವನ ಅಳುಕು. ಇದು ಸಾಧುಗಳ ಸ್ವಭಾವ. ಅವರು ತಮ್ಮ ಬೇಡಿಕೆಗೆ ಎಲ್ಲಿ ಭಂಗಬರುವುದೋ ಎಂಬ ಶಂಕೆಯಿಂದ ತಮ್ಮ ಇಷ್ಟಾರ್ಥವನ್ನು ಮುಂದಿಡುವ ಸಂದರ್ಭದಲ್ಲಿ ಮಧ್ಯಸ್ಥಭಾವವನ್ನು ಅವಲಂಬಿಸುವರು, ಎಂದರೆ, ಮುಂದುವರಿದು ತೋರ್ಪಡಿಸುವುದಿಲ್ಲ.]

೨-೪೦. ಅಪಕಾರದಿಂದಲ್ಲದುಪಕಾರದಿಂದಹನೆ ದುಷ್ಟ ತಾನ್ ಶಾಂತನ್.

(ಶಾಮ್ಯೇತ್ ಪ್ರತ್ಯಪಕಾರೇಣ ನೋಪಕಾರೇಣ ದುರ್ಜನಃ)

[ಬ್ರಹ್ಮನ ಸಮ್ಮುಖದಲ್ಲಿ ದೇವತೆಗಳ ಪರವಾಗಿ ಗುರು ತಾರಕನ ಕೋಟಲೆಯನ್ನು ಒಕ್ಕಣಿಸುವ ಸಂದರ್ಭ : ತಾರಕನನ್ನು ದೇವತೆಗಳೆಲ್ಲ ಸೇವಿಸುತ್ತಿದ್ದರೂ ಅವನು ಹಿಂಸಕನಾಗಿದ್ದಾನೆ. ದುರ್ಜನರು ಅವರು ಗೈದ ಅಪಕಾರಕ್ಕೆ ಮಾಡುವ

ಪ್ರತ್ಯಪಕಾರದಿಂದ ಸುಮ್ಮನಾಗುತ್ತಾರೆಯೇ ಹೊರತು ಉಪಕಾರದಿಂದ ಅಲ್ಲ ದುಷ್ಟರಿಗೆ ದೊಣ್ಣೆಯ ಸೇವೆಯೇ ಮದ್ದು.]

೨-೫೫. ವಿಷವೃಕ್ಷವಾದರುಂ ತಾನೆ ಬೆಳಸಿರ್ದುದನು ಕಡಿಯುವುದು ತಗದು.

(ವಿಷವೃಕ್ಷೋऽಪಿ ಸಂವರ್ಧ್ಯ ಸ್ವಯಂ ಛೇತ್ತುಮಸಾಂಪ್ರತಂ)

['ಪಾತ್ರಸೃಷ್ಟಿ' ವಿಭಾಗದಲ್ಲಿ ಬ್ರಹ್ಮಪಾತ್ರ ಪರಿಚಯ ನೋಡಿ]

೩-೧. ಆತ್ಮಪ್ರಯೋಜನವನನುಸರಿಸಿ ಚಲಿಸುವುದಾಶ್ರಿತರೊಳೊ ಡೆಯರೊಂದಭಿಮಾನವು.

(ಪ್ರಯೋಜನಾಪೇಕ್ಷಿತಯಾ ಪ್ರಭೂಣಾಂ ಪ್ರಾಯಶ್ಚಲಂ ಗೌರವ ಮಾಶ್ರಿತೇಷು)

[ಸಂದರ್ಭ ವಿವರಣೆ : ಪುಟ ೫೬ ನೋಡಿ.]

೩-೪೦. ವಿಘ್ನಂಗಳಾತ್ಮೇಶರಾದರ ಸಮಾಧಿಯನು ಭೇದಿಸುವೊಡೆಂದು ಮೇನಾರ್ಪವೇನು ?

(ಆತ್ಮೇಶ್ವರಾಣಾಂ ನಹಿ ಜಾತು ವಿಘ್ನಾಃ ಸಮಾಧಿ ಭೇದ ಪ್ರಭವೋ ಭವಂತಿ)

[ಮದನನಿಂದ ಈಶ್ವರನ ತಪೋಭಂಗ ಪ್ರಯತ್ನದ ಸನ್ನಿವೇಶ. ವಸಂತನ ಪ್ರಭಾವ ಚರಾಚರ ದ್ವಂದ್ವಗಳ ಮೇಲೆ ಪರಿಣಾಮ ಬೀರಿದೆ. ದೇವತೆಗಳು ಅಪ್ಸರೆಯರನ್ನು ಬೇರೆ ಕಳಿಸಿದ್ದಾರೆ. ಇವುಗಳಿಂದ ವಿಚಲಿತನಾಗದೆ ಈಶ್ವರನು ಧ್ಯಾನಮಗ್ನನಾದನು. ಆತ್ಮದ ಮೇಲೆ ಪ್ರಭುತ್ವವುಳ್ಳವರ ತಪಸ್ಸನ್ನು, ಸಮಾಧಿ ಯನ್ನು, ಎಷ್ಟೇ ವಿಘ್ನಗಳು ಬಂದೊದಗಿದರೂ ಭಂಗಗೊಳಿಸಲಾರವು]

೪-೨೬. ತೆರೆದ ಬಾಗಿಲ ತೆರದೊಳುಣ್ಮುವುದಹುದು ದುಗುಡವು ಬಂಧು ಜನರ್ೈತಂದ ವೇಳೆಯೊಳು.

(ಸ್ವಜನಸ್ಯ ಹಿ ದುಃಖಮಗ್ರತೋ ವಿವೃತದ್ವಾರ ಮಿವೋಪಜಾಯತೇ)

[ಸಂದರ್ಭ : ಪುಟ ೬೯ ನೋಡಿ.—ಹೃದಯದಲ್ಲಿ ದುಃಖ ತುಂಬಿ ಕೊಂಡಿರುತ್ತದೆ. ನಂಟರನ್ನು ಕಂಡಾಗ, ಹೃದಯದ್ವಾರ ತೆರೆದಂತಾಗಿ, ದುಃಖವೆಲ್ಲ ಉಕ್ಕಿ ಹೊರಹರಿಯುತ್ತದೆ. ಇದು ಮಾನವ ಸ್ವಭಾವ. ರತಿ ಹೇಗೆ ಹೊರ ತಾದಾಳು ?]

೪–೨೮. ಮತ್ತೆ ವಲ್ಲಭನೊಲುಮೆ ಸತಿಯರೊಳಚಿರವಾದೊಡದೇನು
ಸುಸ್ಥಿರವಷ್ಟೆ ಗೆಳೆಯರೊಳು.

(ದಯಿತಾಸ್ವನವಸ್ಥಿತಂ ನೃಣಾಂ ನ ಖಲು ಪ್ರೇಮ ಚಲಂ ಸುಹೃಜ್ಜನೇ)

[ಸಂದರ್ಭ: ಪು. ೬೯ ನೋಡಿ.—ಮಾನವರ ಪ್ರೇಮವು ಒಂದು ವೇಳೆ ತಮ್ಮ ಹೆಂಡಿರ ವಿಷಯದಲ್ಲಿ ದೃಢವಾಗಿಲ್ಲದಿದ್ದರೂ ಇದ್ದೀತು. ಆದರೆ, ಗೆಳೆಯರ ವಿಚಾರದಲ್ಲಿ ಅದು ಅಚಲ, ಸುದೃಢ.]

೪–೩೩. ಪ್ರಮದೆಯರು ಪತಿ ವರ್ತ್ಮಗಾಮಿಗಳೆನುವ ತತ್ವನಾ ವಿಚೇತನ
ತಾನುಮರಿತಿಹುದು.

(ಪ್ರಮದಾಃ ಪತಿವರ್ತ್ಮಗಾ ಇತಿ ಪ್ರತಿಪನ್ನಂ ಹಿ ವಿಚೇತನೈರಪಿ)

[ಸಂದರ್ಭ: ಪು. ೬೯ ನೋಡಿ.—ಬೆಳದಿಂಗಳು ಚಂದ್ರನನ್ನೆ ಹಿಂಬಾಲಿಸುವುದು. ಮೋಡ ಹೋದ ಕೂಡಲೆ ಮಿಂಚೂ ಕಣ್ಮರೆಯಾಗುವುದು. ಹೆಣ್ಣು ಯಾವಾಗಲೂ ಗಂಡನ ಮಾರ್ಗವನ್ನೆ ಅನುಸರಿಸತಕ್ಕವಳು ಎಂಬ ತತ್ವ ಅಚೇತನಗಳಲ್ಲಿಯೂ ಕಂಡುಬರುತ್ತದೆ.]

೪–೪೪. ತಪನು ನೀರನು ಕುಡಿದ ನದಿ ಬೇಸಗೆಯ ಕೊನೆಯೊಳು
ಮರಳಿಜಲದೋಘವನು ಸೇರುವುದು.

(ರವಿಪೀತಜಲಾ ತಪಾತ್ಯಯೇ ಪುನರೋಘೇನ ಹಿ ಯುಜ್ಯತೇ ನದೀ)

[ರತಿಗೆ ಆಕಾಶವಾಣಿ ಕೊಟ್ಟ ಭರವಸೆ: ಬೇಸಗೆಯಲ್ಲಿ ಸೂರ್ಯನು ನದಿಯ ನೀರನ್ನು ಹೀರಿದ್ದರೂ, ಬೇಸಗೆಯ ಕಡೆಯಲ್ಲಿ ಎಂದರೆ ಮುಂಗಾರ ಮೊದಲಲ್ಲಿ ಆ ನದಿ ಮತ್ತೆ ನೀರಿನ ಹೊನಲನ್ನು ಪಡೆಯುವುದು. ರತಿಯ ಪತಿವಿರಹ ತಾತ್ಕಾಲಿಕ; ಮುಂದೆ ಪತಿಯ ಸಮಾಗಮವನ್ನು ಪಡೆಯುವುದು ಖಂಡಿತ. ದುಃಖದ ಕಾಲವಾದ ಮೇಲೆ ಸುಖದ ಕಾಲ.]

೫–೧. ಇನಿಯರೊಲ್ಮೆಯೆ ಫಲಂ ಚಾರುತ್ವಕಲ್ತೆ ?

(ಪ್ರಿಯೇಷು ಸೌಭಾಗ್ಯಫಲಾ ಹಿ ಚಾರುತಾ)

[ತನ್ನೆದುರಿನಲ್ಲಿಯೇ ಈಶ್ವರನಿಂದ ಮದನದಹನವಾದುದನ್ನು ಕಂಡ ಗಿರಿಜೆ ಭಗ್ನಮನೋರಥಳಾಗಿ ತನ್ನ ಚೆಲುವನ್ನು ನಿಂದಿಸಿಕೊಂಡಳು. ರೂಪಸೌಂದರ್ಯದ ಪ್ರಯೋಜನವೆಂದರೆ ಪ್ರಿಯರ ಕಡೆಯಿಂದ ತಮ್ಮ ಸೌಭಾಗ್ಯರೂಪದ ಪ್ರೇಮವನ್ನು ಪಡೆಯುವುದೇ ಆಗಿದೆ. ಅದು ದೊರಕದಿದ್ದ ಮೇಲೆ, ರೂಪದಿಂದೇನು ಫಲ ?]

೫–೪. ಪೇಲವ ಶಿರೀಷ ಸುಮುವಾರಡಿಯ ಪಾದವನು

ಸಹಿಸುವೋಲಾಪತತ್ರಿಯನಾಸಲಹುದೆ ?

(ಪದಂ ಸಹೇತ ಭ್ರಮರಸ್ಯ ಪೇಲವಂ ಶಿರೀಷ ಪುಷ್ಪಂ ನ ಪುನಃ ಪತತ್ರಿಣಃ)

[ತಾಯಿ ಮೇನೆ ಮಗಳ ತಪಸ್ಸಿನ ಇಚ್ಛೆಯನ್ನು ನಿರೋಧಿಸುವ ಸಂದರ್ಭ: ಕೋಮಲವಾದ ಶಿರೀಷಪುಷ್ಪವು ದುಂಬಿಯ ಅಡಿಗಳ ಭಾರವನ್ನು ಸಹಿಸಬಲ್ಲದೇ ಹೊರತು ಪಕ್ಷಿಯ ಭಾರವನ್ನಲ್ಲ. ಗಿರಿಜೆಯ ಕೋಮಲ ಶರೀರ ಮನೆಯ ದೇವರ ಪೂಜೆಯಿಂದ ಬಳಲದು. ತಪವೆಲ್ಲಿ ಅವಳ ಶರೀರವೆಲ್ಲಿ ?]

೫-೫. ಆರು ತಿರುಗಿಸಲಹರು ಬಯಕೆಯೊಳು ಬಲಿದಿರುವ

ಬಗೆಯು ಮೇಣ್ ಕೆಳಮೊಗದೊಳಿಳಿವ ಜಲಗತಿಯು ?

(ಕ ಈಪ್ಸಿತಾರ್ಥ ಸ್ಥಿರನಿಶ್ಚಯಂ ಮನಃ ಪಯಶ್ಚ ನಿಮ್ನಾಭಿಮುಖಂ ಪ್ರತೀಪಯೇತ್)

[ಮೇಲಿನ ಸಂದರ್ಭವೆ: ತಗ್ಗಿನ ಕಡೆಗೆ ಓಡುವ ನೀರಿನ ಓಟವನ್ನು ಹಿಂದಿರುಗಿಸುವುದು ಹೇಗೆ ಅಸಾಧ್ಯವೋ ಇಷ್ಟಾರ್ಥದಲ್ಲಿ ನಟ್ಟ ಮನಸ್ಸನ್ನು ತಿರುಗಿಸುವುದೂ ಅಸಾಧ್ಯ. ಮೇನೆ ಪಾರ್ವತಿಯ ತಪಸ್ಸಿನ ನಿಶ್ಚಯವನ್ನು ಕದಲಿಸಲಾರದೆಹೋದಳು.]

೫-೧೬. ಧರ್ಮವೃದ್ಧರೊಳಗಣ್ಯಂ ವಯೋಮಾನಂ

(ಧರ್ಮವೃದ್ಧೇಷು ನ ವಯಃ ಸಮೀಕ್ಷ್ಯತೆ)

[ಪಾರ್ವತಿಯು ತಪಸ್ಸು ಪರಾಕಾಷ್ಠದಶೆಯನ್ನು ಮುಟ್ಟದೆ. ಅಲ್ಪಕಾಲದಲ್ಲಿ ಮಹಾತಪಸ್ವಿನಿಯಾದ ಅವಳನ್ನು ಋಷಿಗಳೇ ನೋಡಬಂದರು. ಇವಳು ಚಿಕ್ಕವಳು, ಹೆಂಗಸು ಎಂಬ ಭೇದಭಾವವನ್ನು ಮಾಡಲಿಲ್ಲ ಅವರು. ಅವರೂ ಜ್ಞಾನಿಗಳು ತಾನೆ ? ಧರ್ಮದಲ್ಲಿ ಉನ್ನತಿ ಪಡೆದಿರುವವರ ವಿಷಯದಲ್ಲಿ ಕಿರಿಯರು ಹಿರಿಯರು ಎಂಬ ವಯಸ್ಸಿನ ಅಳತೆಯನ್ನು ನೋಡತಕ್ಕದ್ದಲ್ಲ ಎಂಬುದನ್ನು ಅವರು ಬಲ್ಲರು]

೫-೩೩. ಧರ್ಮಸಾಧನಕ್ಕಾದ್ಯಂ ಶರೀರಂ

(ಶರೀರಮಾದ್ಯಂ ಖಲು ಧರ್ಮಸಾಧನಂ)

[ಶಿವನು ಉಮೆಯ ತಪಸ್ಸಿಗೆ ಮೆಚ್ಚಿ ವಟುವೇಷಧಾರಿಯಾಗಿ ಬಂದು ಅವಳನ್ನು ಪ್ರಶ್ನಿಸುವ ಸನ್ನಿವೇಶ. ತಪಶ್ಚರಣೆಗೆ ಎಲ್ಲ ಅನುಕೂಲಗಳೂ ಇದ್ದುವೆ ಎಂದು ಪ್ರಶ್ನಿಸಿ, ಯಥಾಶಕ್ತಿಯಾಗಿ ತಾನೆ ತಪಸ್ಸನ್ನು ಆಚರಿಸುವುದು? ಏಕೆಂದರೆ, ಧರ್ಮಸಾಧನೆಗೆ ಶರೀರವೇ ಮೊದಲು-ಎಂದು ಹೇಳುತ್ತಾನೆ. ಇಲ್ಲಿ 'ಖಲು' ಪದ

ಪ್ರಯೋಗ ಪಾದಪೂರಣವಲ್ಲ. ದೇಹವು ಧರ್ಮಾರ್ಜನೆಗೆ ನಿಜವಾಗಿಯೂ ಪ್ರಥಮ ಸಾಧನ, ಮುಖ್ಯ ಸಾಧನ. ಆದ್ದರಿಂದ, ಅದನ್ನು ಆವಶ್ಯಕತೆಗಿಂತ ಹೆಚ್ಚಾಗಿ ದಂಡಿಸುವುದು ಸಲ್ಲದು.]

೫-೩೯. ಸಪ್ತಜನ ಸಾಧ್ಯವಾ ಸಾಧುಜನ ಸಖ್ಯ

(ಸಂಗತಂ ಮನೀಷಿಭಿಃ ಸಾಪ್ತಪದೀನಮುಚ್ಯತೇ)

[ವಟುವೇಷಧಾರಿ ಶಿವನು ಪಾರ್ವತಿಗೆ ಹೇಳುವ ಮಾತು : ಸಜ್ಜನರು ಪರಸ್ಪರ ಸ್ನೇಹ ಬೆಳಸುವುದಕ್ಕೆ ಒಂದಿಗೆ ಏಳು ಮಾತಾಡಿದರೆ ಸಾಕು. (ಅಥವಾ ಒಂದಿಗೆ ಏಳು ಹೆಜ್ಜೆ ದೂರ ನಡೆದರೂ ಸಾಕು.) ಇಷ್ಟು ನುಡಿದಾದ ಮೇಲೆಯೂ, ಪಾರ್ವತಿ ತನ್ನ ತಪಸ್ಸಿನ ಗುರಿಯನ್ನು ತಿಳಿಸದಿರಲು ಕಾರಣವಿಲ್ಲ. ವಟುವನ್ನು ಅನ್ಯನೆಂದು ಭಾವಿಸಬೇಕಾಗಿಲ್ಲ.]

೫-೪೫. ರತ್ನವರಸುವುದಿಲ್ಲವದೆ ಮೃಗ್ಯವಹುದು

(ನ ರತ್ನಮನ್ವಿಷ್ಯತಿ ಮೃಗ್ಯತೇ ಹಿ ತತ್)

[ವಟುವೇಷಧಾರಿ ಶಿವನು ಪಾರ್ವತಿಗೆ ಹೇಳುವ ಮಾತು : (ಸಮುದ್ರದಲ್ಲಿರುವ ಅಥವಾ ಗಣಿಯಲ್ಲಿರುವ) ರತ್ನವು ತನ್ನನ್ನು ಬಯಸುವವರನ್ನು ತಾನೇ ಹುಡುಕಿಕೊಂಡು ಹೋಗುವುದಿಲ್ಲ. ಅದೇ ಅಪೇಕ್ಷಣೀಯವಾಗತಕ್ಕದ್ದು. ಅದನ್ನು ಹುಡುಕಿಕೊಂಡು ಅದರ ಬಳಿಗೆ ಬರಬೇಕು. ಅದು ಇದ್ದ ಕಡೆ ಇರತಕ್ಕದ್ದು. ಶಿವನು ಕನ್ಯಾರತ್ನವಾದ ಗಿರಿಜೆಯನ್ನು ಈಗ ಹುಡುಕಿಕೊಂಡು ಬಂದಿರುವನು. ಆದ್ದರಿಂದ ತಪಸ್ಸು ಸಾಕು ಎಂದು ಅವನ ಹೇಳಿಕೆ.]

೫-೭೩. ವೈದಿಕೀ ಯೂಪಸತ್ಕ್ರಿಯೆಯಂ ಶ್ಮಶಾನ ಭೂಮಿಯ
ಶೂಲಕೆಸಗರೌ ಸಾಧುಜನರು.

(ಅಪೇಕ್ಷ್ಯತೇ ಸಾಧುಜನೇನ ವೈದಿಕೀ ಶ್ಮಶಾನ ಶೂಲಸ್ಯ
ನ ಯೂಪಸತ್ಕ್ರಿಯಾ)

[ಯಜ್ಞಸ್ತಂಭಕ್ಕೆ ಮಾಡಬೇಕಾದ ವೇದವಿಹಿತವಾದ ಪವಿತ್ರ ಸಂಸ್ಕಾರಗಳನ್ನು ಸತ್ಪುರುಷರು ಯಾರೂ ಕೊಲೆಗಂಬವಾದ ಶ್ಮಶಾನದ ಶೂಲಕ್ಕೆ ಮಾಡರು. ಆದ್ದರಿಂದ, ಗಿರಿಜೆಯ ಪ್ರೇಮಕ್ಕೆ ಸರ್ವಥಾ ಯೋಗ್ಯನಲ್ಲದ ಶಿವನಿಂದ ತನ್ನ ಬಯಕೆಯನ್ನು ತಿರುಗಿಸಬೇಕೆಂದು ವಟು ಹೇಳುವನು. ಶಿವನನ್ನು ಶೂಲಕ್ಕೆ ಹೋಲಿಸಿದೆ.]

೫-೮೨. ಕಾಮುಚರರಪವಾದಮಂ ಗಣಿಸಿದಪರೆ ?

(ನ ಕಾಮವೃತ್ತಿರ್ವಚನೀಯಮೀಕ್ಷತೇ)

[ವಟುವಿಗೆ ಗಿರಿಜೆಯ ಕಡೆಯುತ್ತರ: ತಮ್ಮ ಇಷ್ಟದಂತೆ ನಡೆಯುವವರು ಇತರರ ನಿಂದೆಗೆ ಕಿವಿಗೊಡುವುದಿಲ್ಲ. ತನ್ನ ಮನಸ್ಸು ಶಿವನಲ್ಲಿ ನಟ್ಟದೆ. ಇನ್ನು ವಿವಾದ ಸಾಕು. ಹೆಚ್ಚಿನ ಶಿವನಿಂದೆಯನ್ನು ಗಿರಿಜೆ ಸಹಿಸಲಾರಳು. ನಿಂದೆ ಅವಳ ನಿಶ್ಚಯವನ್ನು ಕದಲಿಸಲೂ ಆರದು.]

೫–೮೬. ಕ್ಲೇಶಕಹುದು ಸಫಲತೆಯಲಿ ದಲ್ ಪುನರ್ನವೀನತೆ.

(ಕ್ಲೇಶಃ ಫಲೇನ ಹಿ ಪುನರ್ನವತಾಂ ವಿಧತ್ತೇ)

[ವಟುವೇಷಧಾರಿಯಾದ ಶಿವನು ಪಾರ್ವತಿಗೆ ತನ್ನ ನಿಜ ರೂಪವನ್ನು ತೋರಿ, ಅವಳ ಕೈಹಿಡಿದು, 'ನಿನ್ನ ದಾಸ, ನಿನ್ನ ತಪದಿಂದ ನಾನು ಕ್ರೀತ' ಎನ್ನುವನು. ಗಿರಿಜೆಯ ಆನಂದಕ್ಕೆ ಪಾರವೆಲ್ಲಿ? ತಪಸ್ಸಿನಿಂದ ಅವಳು ಪಟ್ಟದ್ದ ಬಳಲಿಕೆಯೆಲ್ಲ ಕ್ಷಣಮಾತ್ರದಲ್ಲಿ ತೊಲಗಿತು. ಬಯಸಿದ ಫಲ ದೊರೆತರೆ, ಅದಕ್ಕಾಗಿ ಪಟ್ಟ ಕ್ಲೇಶವು ಕ್ಲೇಶವಾಗಿ ಕಾಣದೆ ಹೊಸ ಹುರುಪನ್ನು, ನವೋತ್ಸಾಹ ವನ್ನು, ತಂದುಕೊಡುವುದು. ಕ್ಲೇಶಪಟ್ಟವರು ಹೊಸ ಮನುಷ್ಯರೇ ಆಗುವರು.]

ಕಾವ್ಯದಲ್ಲಿ ಇನ್ನೂ ಹಲವಾರು ಸುಭಾಷಿತಗಳೂ, ರಸಾತ್ಮಕವಾಕ್ಯಗಳೂ, ರಮಣೀಯ ಪದಪುಂಜಗಳೂ ಹೇರಳವಾಗಿ ಇವೆ. ಗಮನಾರ್ಹವಾದ ಕೆಲವನ್ನು ಇಲ್ಲಿ ಆಯ್ದು ಕೊಟ್ಟಿದೆ:—

ಅನ್ವರ್ಥಗೊಳಿಸುತಿವೆ ಗಿರಿರಾಜ ಶಬ್ದವನು ಚಮರೀಮೃಗಂಗಳು(೧–೧೩).

ಶೇಷಾಂಗ ನಿರ್ಮಾಣ ವಿಧಿಯೊಳಾ ವಿಧಿ ತಾನು ಮತ್ತೆ ಲಾವಣ್ಯವನು ಪಡೆದನೋವೋ (೧–೩೫)

ಚಂಚಲೆ ಲಕ್ಷ್ಮಿ ಉಭಯ ಕಾಂತಿಯನುಮೆಯ ಮೊಗದೆ ಗಳಿಸಿದಳಲ್ಲಿ ನೆಲಸಿ ನಿಂದು. (೧–೪೩)

ತನ್ನ ದೇಹೋದ್ವಹನಕಾ ವಿಷ್ಣು ಶೇಷನನು ತಿಳಿದು ಭೂಧರಣವನು ಯೋಜಿಸಿಹನು (೩–೧೬)

ಬೀಜದಿಂದೊಗೆಯುವಗೆ ನೀರನಾಶಿಸುವಂತೆ ಆ ಕಾರ್ಯಕಾದೆ ನೀನಾದಿ ಯಂತೆ (೩–೧೮)

ಅಖ್ಯಾತವಿರಲೇನನ್ಯ ಸಾಧಾರಣದ ಕರ್ಮವನ್ನೆಸಗುವುದೆ ಕೀರ್ತಿಪ್ರದ (೩–೧೯)

ಆತನಾಣತಿ ಸಂದು ಸರ್ವಕಾನನಮುಂದು ಚಿತ್ರಾರ್ಪಿತಾರಂಭವಾಗಿ ದುರ್ದಂದು (೩-೪೨)

ಈಶ್ವರವ್ಯಾಹೃತಿಗದೆಂದುವಿಾ ಲೋಕದೊಳು ಉಂಟೆ ವಿಪರೀತಾರ್ಥದೊಂದು ತೊದಳು (೩-೬೩)

ಸ್ತ್ರೀಯರತಿ ಕಠಿನೆಯರು ದಿಟವಹುದು (೪-೫)

ನೋಢು ನಾನಿಂದದರ ದಶೆಯೊಲು ಸಹಿಸಲಸದಳವೆನಿಸುವಳಲಿನ ಹೊಗೆಯೊಲುಳಿದಿಹೆನು. (೪-೩೦)

ಅಶನಿ ಅಮೃತದ್ವಯಕೆ ತಾ ವಾ ಧಾ ರ ರಾ ಗಿ ಹ ರಂಬುಧರದಂತಾ ಜಿತೇಂದ್ರಿಯರು (೪-೪೩)

ಷಟ್ಪದಶ್ರೇಣಿ ಮಾತ್ರದೊಳಲ್ತು ಪಂಕಜಂ ಶೈವಲಾ ಸಂಗದಿಂದಲು-ಮೆಸೆಯುಬಹುದು (೫-೯)

ಮೊದಲೊಗೆದ ಅವುಗಳಲಿ ಪುತ್ರವಾತ್ಸಲ್ಯವನು ಕಳೆಯಲಾರದನಾದನಾ ಬಳಿಕ ಗುಹನು (೫-೧೪)

ಅವಳ ವಪು ದಲ್ ಕನಕಪದ್ಮನಿರ್ಮಿತವಹುದು (೫-೧೯)

ಪಾಪವೃತ್ತಿಯೊಳಿರದು ರೂಪ ತಾನು (೫-೩೬)

ಅಂಭೋಜಮುಷ್ಣವಾರಣಮೆನಿಸಿದಂತೆ (೫-೫೨)

ಮನೋರಥಕೆ ಅವಿಷಯುವಾವುದಿಹುದಯ್ (೫-೬೪)

---

## ಕುಮಾರ ಸಂಭವ-ಶಾಕುಂತಲ

"ಕುಮಾರಸಂಭವ ಶಾಕುಂತಲಗಳನ್ನು ಒಟ್ಟಿಗೆ ಸಮಾಲೋಚಿಸಬೇಕಾದುದು ಆವಶ್ಯಕ. ಎರಡರ ಕಾವ್ಯವಿಷಯವೂ ಆಂತರಿಕವಾಗಿ ಒಂದೇ; ಎರಡು ಕಾವ್ಯಗಳಲ್ಲಿಯೂ ಮನ್ಮಥನು ಯಾವ ಸಮಾಗಮವನ್ನು ಸಾಧಿಸುವುದಕ್ಕೆ ಪ್ರಯತ್ನಿಸುತ್ತಾನೆಯೋ ಅದಕ್ಕೆ ದೈವಶಾಪವೂ ತಟ್ಟುತ್ತದೆ. ಆ ಸಮಾಗಮವು ಸಿದ್ಧಿಯನ್ನು ಹೊಂದದೆ, ಸಂಪೂರ್ಣವಾಗದೆ, ತನ್ನ ವಿಚಿತ್ರ ಶಿಲ್ಪ ನೈಪುಣ್ಯದಿಂದ ನಿರ್ಮಿತವಾದುದೂ ಪರಮಸುಂದರವಾದುದೂ ಆದ ವಿವಾಹ ಶಯ್ಯೆಯಲ್ಲಿಯೇ ದೈವಾಹತವಾಗಿ ನಾಶವಾಗುತ್ತದೆ. ಅದಾದಮೇಲೆ ಅಸದಳವಾದ ದುಃಖದ ಮತ್ತು ದುಸ್ಸಹವಾದ ವಿರಹ ವ್ರತದ ಮೂಲಕವಾಗಿ ಲಭಿಸತಕ್ಕ ಸಮಾಗಮದ ಸ್ವರೂಪವೇ ಬೇರೆ; ಅದು ಸೌಂದರ್ಯದ ಬಾಹ್ಯಾವರಣಗಳೆಲ್ಲವನ್ನೂ ಪರಿತ್ಯಾಗಮಾಡಿ ಸ್ನಿಗ್ಧವೂ

ನಿರ್ಮಲವೂ ಆದ ರೂಪವನ್ನು ತಾಳಿ ಮಂಗಳಕರವಾದ ಶುಭ್ರಕಾಂತಿಯಿಂದ ಮನೋಹರವಾಗಿ ಪರಿಣಮಿಸುತ್ತದೆ."

*    *    *    *

"ಕುಮಾರಸಂಭವ ಶಾಕುಂತಲಗಳಲ್ಲಿ ಪ್ರತಿಪಾದಿತವಾಗಿರುವ ವಿಷಯವು ಒಂದೇ ಎಂದು ಕಂಡುಬರುತ್ತದೆ. ಮೋಹದಿಂದ ಯಾವುದು ನಿಷ್ಫಲವೋ ಅದು ಮಂಗಳದಿಂದ ಸಫಲವಾಗುತ್ತದೆಂದೂ, ಧರ್ಮವು ಧರಿಸುವ ಸೌಂದರ್ಯವೇ ಸ್ಥಿರವಾದುದೆಂದೂ, ಪ್ರೇಮದ ಶಾಂತಸಂಯತ ಕಲ್ಯಾಣರೂಪವೇ ಶ್ರೇಷ್ಠವಾದ ರೂಪವೆಂದೂ, ಉಚ್ಛೃಂಖಲತೆಯಲ್ಲಿ ಸೌಂದರ್ಯದ ಕ್ಷಿಪ್ರವಿಕಾರವೂ ಬಂಧನ ದಲ್ಲಿಯೇ ಯಥಾರ್ಥವಾದ ಮಂಗಳವೂ ಇರುವುವೆಂದೂ, ಕವಿಯು ಎರಡು ಕಾವ್ಯಗಳಲ್ಲಿಯೂ ತೋರಿಸಿರುತ್ತಾನೆ. ಭರತಖಂಡದ ಪುರಾತನ ಕವಿಯು ಪ್ರೇಮವೇ ಪ್ರೇಮದ ಚರಮ ಲಕ್ಷ್ಯವೆಂಬುದನ್ನೊಪ್ಪದೆ ಮಂಗಳವನ್ನೆ ಪರಮ ಲಕ್ಷ್ಯವೆಂಬುದಾಗಿ ಸಾರಿರುತ್ತಾನೆ. ಸ್ತ್ರೀ ಪುರುಷರ ಪ್ರೇಮವು ಬಂಜೆಯಾಗಿ ಕೇವಲ ತಮ್ಮ ತಮ್ಮಲ್ಲಿಯೇ ಸಂಕೀರ್ಣವಾಗಿದ್ದರೆ, ಮಂಗಳವನ್ನು ಪಡೆಯದೆ ಸಂಸಾರದಲ್ಲಿಯೂ ಮಕ್ಕಳು ಮರಿಗಳಲ್ಲಿಯೂ ಅತಿಥಿ ಅಭ್ಯಾಗತರಲ್ಲಿಯೂ ನೆರೆಹೊರೆಯವರಲ್ಲಿಯೂ ಅಪೂರ್ವ ಸೌಭಾಗ್ಯರೂಪವಾಗಿ ವ್ಯಾಪಿಸದಿದ್ದರೆ, ಅಂತಹ ಪ್ರೇಮವು ಸುಂದರವೂ ಅಲ್ಲಿ ಸ್ಥಾಯಿಯೂ ಅಲ್ಲ ಎಂಬುದೇ ಆತನ ಮತ."

—ರವೀಂದ್ರನಾಥ ಠಾಕೂರ್

['ಪ್ರಾಚೀನ ಸಾಹಿತ್ಯ': ದಿವಂಗತ ಟಿ. ಎಸ್. ವೆಂಕಣ್ಣಯ್ಯನವರ ಅನುವಾದ]

# ಬಿಸಿಲು-ಬೆಳುದಿಂಗಳು

ಲೇಖಕ: ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ.

---

## ೧

### ಮೊದಲ ಮಾತು; ಹೆಸರಿನ ಔಚಿತ್ಯ

ಕನ್ನಡ ಸಾಹಿತ್ಯದ ಆಧುನಿಕ ಲೇಖಕರಲ್ಲಿ ಅನೇಕರು ಸಾಹಿತ್ಯರೂಪಗಳಲ್ಲಿ ಯಾವುದಾದರೂ ಒಂದನ್ನು ಆರಿಸಿಕೊಂಡು ಆ ರೀತಿಯಲ್ಲಿ ಕೀರ್ತಿ ಸಂಪಾದಿಸಲು ಪ್ರಯತ್ನ ಪಟ್ಟಿದ್ದಾರೆ. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ತಮ್ಮ ಕಲ್ಪನೆಯನ್ನು ಹರಿಯಬಿಟ್ಟವರು ಹೆಚ್ಚಾಗಿ ಸಿಕ್ಕುವುದಿಲ್ಲ. ಇದಕ್ಕೆ ಸರ್ವತೋಮುಖವಾದ ಆಸಕ್ತಿಯೂ ಶ್ರದ್ಧೆಯೂ ಕಾರ್ಯಶೀಲತೆಯೂ ಬೇಕು. ಹೀಗೆ ಕೆಲಸ ಮಾಡಿದವ ವರಲ್ಲಿ ಈ ಕತೆಗಾರರು ಒಬ್ಬರು. ವಿಸ್ತಾರವಾದ ಮತ್ತು ಆಳವಾದ ವ್ಯಾಸಂಗ ವನ್ನು ಮಾಡ್ಡಿದರೂ ಎಲೆಯಮರೆಯ ಹೂವಿನಂತಿದ್ದು ತಮ್ಮ ಸಾರಸ್ವತ ಕಾರ್ಯದಿಂದ ಪರಿಮಳವನ್ನು ಹರಡುವವರು ಶ್ರೀ ಎಂ. ವಿ. ಸೀ. ಇವರ ಕತೆ, ಕಾದಂಬರಿ, ನಾಟಕ, ಕವನ, ವಿಮರ್ಶೆ ಮುಂತಾದ ವಿವಿಧ ಲೇಖನ ಗಳನ್ನು ಓದಿರುವವರಿಗೆ ಇದು ಗೊತ್ತಾಗುತ್ತದೆ. ಆತ್ಮಪ್ರಶಂಸೆಯೂ ಬೇಕಾದವರ ಕಹಳೆಯೂ ಇಲ್ಲದವರಿಗೆ ಕೀರ್ತಿ ಬರುವುದು ನಿಧಾನವಾದರೂ, ಅರ್ಹತೆಯಿದ್ದ ಕಡೆ ಅದು ಬರುವುದು ಖಂಡಿತ. ಈ ರೀತಿ ಬಂದಿರುವುದು ಇವರ ಕೀರ್ತಿ–ಕಾಲು ಶತಮಾನಕ್ಕೂ ಮೀರಿದ ಶ್ರದ್ಧಾಯುತವಾದ ಜೀವನದಿಂದ.

'ದೃಷ್ಟಿ ಲಾಭ'ದಂತಹ ಕಥೆಯನ್ನೂ 'ಮಾದನ ಮಗಳು' ಕಾದಂಬರಿ ಯನ್ನೂ ಬರೆಯಬಲ್ಲವರಿಗೆ ದೈವದತ್ತವಾದ ಶಕ್ತಿಯಿದೆ ಎನ್ನಲಡ್ಡಿಯಿಲ್ಲ. ಆದರೆ "ಎಂ. ವಿ. ಸೀ." ಅವರ ಲೇಖನ ಕಲೆಯಲ್ಲಿ ಇರುವ ಮುಖ್ಯಲೋಪವೊಂದರಿಂದ ಈ ಕೆಲವು ಗುಣಗಳು ಮುಚ್ಚಿಹೋಗಿವೆ. ಅವರ ಶಕ್ತಿ ಕೆಲವೊಮ್ಮೆ ಮಿಂಚಿನಂತೆ ಹೊಳೆಯುವಾಗ ಮತ್ತೆ ಕೆಲವು ವೇಳೆ ಅತಿ ಸಾಧಾರಣತೆಗೆ ಇಳಿದುಬಿಡುತ್ತದೆ. ಆದರೂ, ಒಂದು ನಿಶ್ಚಿತವಾದ ನೀತಿದೃಷ್ಟಿ, ಶುಭ್ರವಾದ ಶೈಲಿ–ಹತ್ತಕ್ಕೆ ಹಾರದೆ ಐದಕ್ಕೆ ಅವತರಿಸದೆ ಇರುವ ಶೈಲಿ–ಇವು ಅವರ ಲೇಖನದಲ್ಲೆಲ್ಲಾ ಕಂಡುಬರುತ್ತವೆ.

‘ ಬಿಸಿಲು–ಬೆಳುದಿಂಗಳು ’ ಇವರ ಈ ಗುಣಗಳನ್ನು ಮನದಟ್ಟು ಮಾಡುವ ಕಥಾಸಂಕಲನ. ಇದರಲ್ಲಿ ಬಿಸಿಲೇನು, ಬೆಳುದಿಂಗಳೇನು ? ಎಂದು ವಾಚಕರು ಪ್ರಶ್ನಿಸಬಹುದು. ಜೀವನದಲ್ಲಿ ತಾಪ, ದುಃಖ, ನಿಟ್ಟುಸಿರು, ಅವಮಾನ, ಚಿಂತೆ, ಬಡತನ, ಅನಕ್ಷರತೆ, ಅಧೈರ್ಯ, ಇವು ಎಲ್ಲಿಲ್ಲದ ಕತ್ತಲೆಯನ್ನು ತುಂಬಿಬಿಡುತ್ತವೆ. ಮಾನವನಿಗೆ ಈ ಕತ್ತಲೆಯೇ ಬಿಸಿಲು. ಈ ಉಪಮಾನ ವಿಚಿತ್ರವಾಗಿ ಕಾಣ ಬಹುದು. ಆದರೆ ಬಿಸಿಲು ಎಂದೂ ತಾಪಕ್ಕೆ ಕಾರಣವಾದದ್ದು. ಇಲ್ಲಿ ಅದೇ ಅರ್ಥ ಅನ್ವಯವಾಗತಕ್ಕದ್ದು. ಹೀಗೆಯೇ ಶಾಂತಿ, ಸುಖ, ನಗು, ಗೌರವ, ನಿಶ್ಚಿಂತೆ, ಐಸಿರಿ, ವಿದ್ಯೆ, ಧೈರ್ಯೋತ್ಸಾಹಗಳು ಅದೇ ಜೀವನಕ್ಕೆ ತಂಪಾದ ಬೆಳಕನ್ನು ತರುತ್ತದೆ. ಇದೇ ಬೆಳುದಿಂಗಳು. ಜೀವನದಲ್ಲಿ ಬಿಸಿಲು–ಬೆಳುದಿಂಗಳು ನೆಳಲು–ಬೆಳಕಿನಂತೆ, ಮಾವು–ಬೇವಿನಂತೆ, ಒಂದರೊಡನೊಂದು ಬರತಕ್ಕದ್ದು. ಇದು ಒಂದು ನಿತ್ಯ ಸತ್ಯ. ಕೆಲವರ ಜೀವನದಲ್ಲಿ ಬಿಸಿಲೇ ಹೆಚ್ಚಾಗಿದ್ದು ಮತ್ತೆ ಕೆಲವರ ಜೀವನದಲ್ಲಿ ಬೆಳುದಿಂಗಳೇ ಹೆಚ್ಚಾಗಿರಬಹುದು. ಆದರೆ ಒಂದೇ ಒಂದರ ಅನುಭವವನ್ನು ಪಡೆದವರು ಯಾರೂ ಇಲ್ಲ. ಈ ಕಥಾಸಂಗ್ರಹದಲ್ಲಿ ಹಾದು ಹೋಗುವ ಪಾತ್ರಗಳ ಜೀವಿತದಲ್ಲಿ ಈ ಅನುಭವ ಹಾಸುಹೊಕ್ಕಾಗಿ ಚಿತ್ರಿತವಾಗಿದೆ. ‘ ವೃಷ್ಟಿಲಾಭ ’ದಲ್ಲಿ ಬರುವ ಶಿವರಾಮಯ್ಯ–ಶಾರದಮ್ಮ ಇವರ ಸಂಸಾರದಲ್ಲಿ ನಡೆದಂತೆ, ಗಂಡನಿಗೆ ಸುಖ ಉಂಟಾದುದರ ಪರಿಣಾಮವಾಗಿಯೇ ಹೆಂಡತಿಗೆ ದುಃಖ ಒದಗಬಹುದು. ಮತ್ತೆ ದೈಹಿಕವಾದ ಒಂದು ಶಕ್ತಿನಾಶವಾಗುವುದರಿಂದ ಮತ್ತೆ ಇಬ್ಬರಿಗೂ ಇದ್ದದ್ದರಲ್ಲಿಯೇ ತೃಪ್ತಿಪಡುವ ಮನಸ್ಸು ಬರಬಹುದು. ‘ ನೀಲಿಯ ಕವರು ’ ತಿಳಿಸುವಂತೆ, ಅನಿರೀಕ್ಷಿತವಾದ ಪತ್ರಾಗಮನದಿಂದ ಸುರಸದ ಹಾಲಿನಲ್ಲಿ ವಿರಸದ ಹುಳಿ ಹಿಂಡಿ ಹೋಗುವುದೂ ಸಾಧ್ಯ. ಆದರೂ ಮತ್ತೆ ಅನಿಶ್ಚಯತೆ ಮಾಯವಾಗಿ ಇಂದಿರೆಯ ಕೆನ್ನೆ ಕೆಂಪಡರಿಬಿಡುತ್ತದೆ. ಜಟಕಾ ಹೊಡೆಯುವ ಸಾಬಿ ಒಳ್ಳೆಯ ಸನ್ಯಾಸಿಯಂತೆ ವೇದಾಂತ ಬೋಧೆ ಮಾಡುವುದನ್ನು ನಾವು ಕೇಳುತ್ತೇವೆ. ಅವನ ಮಗ, ಎಲ್ಲರಿಂದಲೂ ಬಾಡಿಗೆಯನ್ನು ಬಿಡದೆ ವಸೂಲು ಮಾಡುವ ‘ ಖದೀಮ ’ ತನಗೆ ದುಡ್ಡು ಬರಬೇಕಿಲ್ಲವೆಂದು ಹೇಳುವುದೂ ನಮ್ಮ ಕಿವಿಗೆ ಬೀಳುತ್ತದೆ. ಮೊದಲು ನಿಷ್ಪ್ರಯೋಜಕನೆಂದು ಹೆಸರುವಾಸಿಯಾಗಿದ್ದರೂ, ಸೈನ್ಯಕ್ಕೆ ಸೇರಿ ತನ್ನ ಮನೆಗೆ ಆರ್ಥಿಕ ಸಹಾಯವನ್ನೂ ದೇಶಕ್ಕೆ ಪ್ರಾಣದಾನವನ್ನೂ ಮಾಡುವ ಸೀನಪ್ಪನ ಚಿತ್ರ ಕಣ್ಮುಂದೆ ಕಟ್ಟುತ್ತದೆ.

‘ ಲಲಿತೆ ’ಯನ್ನು ಕಳೆದುಕೊಂಡ ರಾಮಚಂದ್ರ ಲಲಿತರಾಗದಲ್ಲಿಯೇ

ಪ್ರೇಯಸಿಯನ್ನು ಆಹ್ವಾನಿಸಿ ಸಂಗೀತದಲ್ಲಿ ದುಃಖಿಸುವುದು ನಮ್ಮ ಹೃದಯವನ್ನು ಹಿಂಡುತ್ತದೆ. ಚೋಟುದ್ದದ ಹುಡುಗನಿಗೆ ಅನ್ನ ಹಾಕುವ ದಾಸಯ್ಯನೂ ಅವರ ದರಿದ್ರ ಸಹಾಯಕ ಸಂಘವೂ ನಮ್ಮ ಕಣ್ಮುಂದೆ ಹಾದು ಹೋಗುತ್ತವೆ. ಪಾಶ್ಚಾತ್ಯ ಕತೆಯಾದ 'ಗಂಡಿನ ಹೃದಯ'ದಲ್ಲಿ ಗಂಡಿನ ಆಲೋಚನೆಗೂ ಅವನ ಕರ್ತವ್ಯ ಬುದ್ಧಿಗೂ ಇರುವ ಹೊಯ್ದಾಟದ ಸೂಕ್ಷ್ಮಚಿತ್ರ ಮಾರ್ಮಿಕವಾಗಿ ಚಿತ್ತವನ್ನು ಕಲಕಿಬಿಡುತ್ತದೆ.

'ಹುಚ್ಚು-ಅವರ ಚಿಕಿತ್ಸೆ' ಇದು ವಸ್ತುವಾಗುಳ್ಳ ಕತೆ 'ತಾಯಿ ಮಗ' ಅಸಾಧಾರಣ ಅವಾಸ್ತವಿಕವಾದರೂ ಹುಚ್ಚಿಯ ಮನಸ್ಸಿನ ಚಿತ್ರವನ್ನು ಮುಂದಿಡುತ್ತದೆ. 'ಸುಂದರ ಪರಿವರ್ತನೆ' ವಾಸ್ತವ ಚಿತ್ರವಾದರೂ ವಿಧವೆಯರ ಮೂಕವೇದನೆಗೆ ಆಕಾರವನ್ನು ತಂದಿಡುತ್ತದೆ. ಭಾವಪ್ರಧಾನವಾದ 'ಮೋಡದ ದಿಬ್ಬಣ'ದಲ್ಲಿಯೂ ಕರಿಯನ ಚಿಂತೆಗೂ ಕನಸಿಗೂ ನಡುವಣ ವ್ಯತ್ಯಾಸ ಚೆನ್ನಾಗಿಯೇ ಚಿತ್ರಗೊಂಡಿದೆ.

ಈ ಹೆಸರಿನ ವಿವರಣೆ ಅಷ್ಟೇ ಅಲ್ಲ. ಇದರಲ್ಲಿ ಮತ್ತೊಂದು ಸ್ವಾರಸ್ಯವೂ ಅಡಗಿದೆ. ಯಾವುದು ಬೆಳುದಿಂಗಳಾಗಿ ಕಾಣುತ್ತದೆಯೋ ಅದೇ ಬಿಸಿಲಾಗಿಯೂ, ಬಿಸಿಲೇ ಬೆಳುದಿಂಗಳಾಗಿಯೂ ಮಾರ್ಪಡುವ ಸನ್ನಿವೇಶಗಳನ್ನೂ ನಾವಿಲ್ಲಿ ಕಾಣುತ್ತೇವೆ. ಶಿವರಾಮಯ್ಯನಿಗೆ ಕಣ್ಣು ಬಂದಮೇಲೆ ಶಾರದಮ್ಮ ಬಿಸಿಲಾದಳು; ಭಾಗ್ಯಮ್ಮ ಮತ್ತು ಅವಳ ಮಗಳು ಬೆಳುದಿಂಗಳಾದರು. ಆದರೆ ಇದು ಹೀಗೆ ಇದ್ದದ್ದು ಎಷ್ಟು ದಿನ? ಶಿವರಾಮಯ್ಯನ ಕಣ್ಣು ಮತ್ತೆ ದೃಷ್ಟಿಹೀನವಾಗುವತನಕ ಮಾತ್ರ. ಆ ಬಳಿಕದ ಪವಾಡವನ್ನು ನೋಡಿ! ಶಾರದಮ್ಮನೇ ಬೆಳುದಿಂಗಳು! ಮಿಕ್ಕ ಬಿಸಿಲಿನ ಸಮಾನವಾದವರ ಹೆಸರೇ ಬರುವುದಿಲ್ಲ. ಆಮೇಲೆ ಹೀಗೆಯೇ ಇಂದಿರೆಯ ಗಂಡನ ಕೋಪದ ಬಿಸಿಲು ಗಂಡಿನ ಹೃದಯ ಗೂಗ್ಲಿಲ್ಮೋವಿನ ಕನಸಿನ ಬೆಳುದಿಂಗಳು, ಇತ್ಯಾದಿಯಾಗಿ ಅನೇಕ ಕತೆಗಳಲ್ಲಿ "ಬಿಸಿಲು-ಬೆಳುದಿಂಗಳ" ಪರ್ಯಾಯವ್ಯಾಪ್ತಿಸೂಚಿಕವಾಗಿದೆ.

ಇವೆಲ್ಲ ಬಿಸಿಲು-ಬೆಳುದಿಂಗಳು. ಆದುದರಿಂದಲೇ ಕಥೆಗಳ ಸಂಗ್ರಹಕ್ಕೆ ಆ ಹೆಸರು. ಇದೇ ಅದರ ಔಚಿತ್ಯ. ಜೀವನದ ವಿವಿಧ ಮುಖದ ಚಿತ್ರಣದ ಕಡೆಗೆ ಕೈದೋರುವ ಕಂಬ ಈ ಹೆಸರು, ಅಷ್ಟೆ.

## ೨

# ಕತೆಗಳ ಹುರುಳು

## ದೃಷ್ಟಿಲಾಭ

ಈ ಸಂಗ್ರಹದಲ್ಲಿರುವ ಸ್ವಂತ ಕಥೆಗಳೆಲ್ಲೆಲ್ಲಾ ಈ ಕಥೆ ಬಹು ಸೊಗಸಾದುದು. ಇಲ್ಲಿಯ ಕಥನ ಕ್ರಮದಲ್ಲಿ ಯಾವ ಹೊಸತನವೂ ಇಲ್ಲ. ಓದುಗನನ್ನು ಚಕಿತನನ್ನಾಗಿ ಮಾಡುವ ಯಾವ ವಿಚಿತ್ರ ತಂತ್ರವೂ ಇಲ್ಲ. ಇಲ್ಲಿಯ ಸೊಗಸಿರುವುದೆಲ್ಲ ಅದರ ನಿರಾಭರಣ ಸೌಂದರ್ಯದಲ್ಲಿ. ಕಥಾವಸ್ತುವೂ ಬಹಳ ಹಳೆಯದೆ. ಆದರೆ ಅವನ್ನು ಉಪಯೋಗಿಸಿಕೊಂಡಿರುವ ರೀತಿ ಹೊಸದಾಗಿದೆ. ಶಾರದಮ್ಮನ ಗಂಡ ಶಿವರಾಮಯ್ಯನಿಗೆ ಕಣ್ಣು ಕಾಣುವುದಿಲ್ಲವೆಂಬ ಕಾರಣದಿಂದ ಅವಳಿಗೆ ತುಂಬ ದುಃಖ. ಮುಪ್ಪಿನಲ್ಲಿ ಕಣ್ಣು ಬಂದರೇನು ಬಿಟ್ಟರೇನು ? ಪ್ರಾಯದಲ್ಲಿರುವಾಗ ಸತಿಪತಿಯರು ಪರಸ್ಪರ ನೋಡಿ ನಲಿಯಲು ಅವಕಾಶವಿರಬೇಡವೆ ? ವಿಧಿ ಇದರ ಮಧ್ಯೆ ಕುರುಡು ತಂದಿಟ್ಟು ಈ ಸುಖಕ್ಕೆ ಅಡ್ಡಿ ಒಡ್ಡಿತು. ಅಂತರಂಗದಲ್ಲಿಯೇ ತಪ್ತಳಾಗುತ್ತಿದ್ದ ಶಾರದಮ್ಮನಿಗೆ ಅಪೂರ್ವವಾದ ಒಂದು ಆಸೆ ಮೂಡಿತು, ಊರ ಹೊರಗೆ ಪವಾಡಗಳನ್ನು ಮೆರೆಯುತ್ತಿದ್ದ ವೈರಾಗಿಯ ಕಥೆಯನ್ನು ಕೇಳಿದಾಗ. 'ಏಕೆ ಪ್ರಯತ್ನ ಪಡಬಾರದು. ಕಣ್ಣು ಬಂದರಂತೂ ಸರಿಯೆ. ಬರದಿದ್ದರೆ ತಾನೆ ಕೆಟ್ಟಿದ್ದೇನು ?' ಎನ್ನಿಸಿತು.

ಹೀಗೆ ಯೋಚಿಸಿದ ಶಾರದಮ್ಮ ಸನ್ಯಾಸಿಯನ್ನು ಕಂಡಳು. ಅವನು "ದೇವರು ಕೊಟ್ಟ ಕಷ್ಟವನ್ನು ಅನುಭವಿಸುವುದೇ ಸರಿಯಾದ ಮಾರ್ಗ. ಇದೆಲ್ಲ ದೈವಸಂಕಲ್ಪ. ಕುರುಡರಾದರೇನು, ದಿವ್ಯವಾದ ಸಂಗೀತ ಬರುವುದಿಲ್ಲವೆ ? ಶಾರದಮ್ಮನಂತಹ ಪತಿವ್ರತೆಯ ಕೈಹಿಡಿದಿಲ್ಲವೆ ? ದೈವಸಂಕಲ್ಪವನ್ನು ಮೀರುವುದಕ್ಕೆ ಹೋಗುವುದು ಅನರ್ಥಕಾರಿ" ಎಂದು ತಿಳಿಸಿಬಿಟ್ಟನು. ಅವಳ ಮನಸ್ಸು ನೊಂದುದನ್ನು ತಿಳಿದು ಒಂದು ಪರಿಹಾರವನ್ನೂ ಸೂಚಿಸಿ, ಆ ಔಷಧಿಯ ಪರಿಣಾಮವೇನಾಗುತ್ತದೆಂಬುದನ್ನು ಮೂರು ವರ್ಷಗಳ ತರುವಾಯ ಅದೇ ದಿನ ಬರುವ ತನಗೆ ತಿಳಿಸಬಹುದೆಂದು ಹೇಳಿ ಕಳುಹಿಸಿದನು.

ಶಾರದಮ್ಮನ ಆಸೆ ಫಲಿಸಿತು. ದೃಷ್ಟಿಲಾಭವಾಯಿತು ಶಿವರಾಮಯ್ಯನಿಗೆ. ಆದರೆ ಅವನ ವ್ಯವಹಾರ ವ್ಯತ್ಯಾಸ ಹೊಂದಿತು. ಸಂಗೀತ ಪಾಠ ಹೇಳಿಕೊಡುವುದಕ್ಕಾಗಿ ಅನೇಕ ಮನೆಗಳಿಗೆ ಹೋಗುತ್ತಿದ್ದ ಅವನಿಗೆ ತನ್ನ ಹೆಂಡತಿಯ

ಕುರೂಪ ಹೆಚ್ಚು ಹೆಚ್ಚು ಮನದಟ್ಟಾಯಿತು. ವೇಶ್ಯೆಯಾದ ಭಾಗ್ಯಮ್ಮನ ಮಗಳು ಲಲಿತೆಯಲ್ಲಿ ಮೋಹ ಬೆಳೆಯಿತು. ಭಾಗ್ಯಮ್ಮನ ಸ್ನೇಹವಾಯಿತು. ಮಗಳ ಮೇಲಿನ ಮೋಹದಿಂದ ತಾಯಿಯಲ್ಲಿ ಆತ್ಮೀಯನಾಗಿ ಬಿಟ್ಟನು. ಇನ್ನೇನು! ವೇಶ್ಯಾಸಂಪರ್ಕದ ಪರಿಣಾಮವೆಲ್ಲ ಒಂದೊಂದಾಗಿ ಫಲಿಸಿ ಮತ್ತೆ ಶಿವರಾಮಯ್ಯ ಕುರುಡನಾದನು.

ಮೂರು ವರ್ಷ ಸಂದಮೇಲೆ ಮತ್ತೆ ಅದೇ ಊರಿಗೆ ಬಂದ ಬೈರಾಗಿಯ ಬಳಿಗೆ ತಾನೇ ಹೋಗಿ ವಿಚಾರವನ್ನು ತಿಳಿಸಲು ಶಾರದಮ್ಮನಿಗೆ ನಾಚಿಕೆಯಾಯಿತು. ಆದರೆ ಯಜಮಾನರ ಶಿಷ್ಯನಾದ ಶಂಕರನೆಂಬ ಯುವಕನನ್ನು ಕಳುಹಿಸಿ ಇದ್ದ ಎಲ್ಲ ವಿಚಾರಗಳನ್ನು ತಿಳಿಸಿದಳು. ಬೈರಾಗಿಯು "ಇದು ಸ್ವಯಂಕೃತಾಪರಾಧವಪ್ಪ" ಎಂದು ಹೇಳಿ ರೋಗಿಯಾಗಿದ್ದ ಶಿವರಾಮಯ್ಯನಿಗೆ ಚಿಕಿತ್ಸೆ ಮಾಡಿಸುವಂತೆ ಗುರು ಪತ್ನಿಗೆ ತಿಳಿಸಬೇಕೆಂದು ಹೇಳಿ ಹೊರಟು ಹೋದನು.

ಈ ಮೂರು ವರ್ಷಗಳಲ್ಲಿ ಸಂಸಾರದಲ್ಲಿ ಆದ ಕಷ್ಟ ನಿಷ್ಠುರಗಳ ವಿವರಣೆಯಿಲ್ಲದಿದ್ದರೂ ಅವು ಸಾಕಷ್ಟು ಸೂಚಿತವಾಗಿವೆ. ಕಥೆಯ ಕೊನೆಯಲ್ಲಿ ಶಿಷ್ಯನಾದ ಶಂಕರನ ಮದುವೆಯ ವಿಚಾರ ಬಂದು, ಅವನು ಹುಡುಗಿಯನ್ನು ಒಪ್ಪಬೇಕಾದಾಗ ಶಿವರಾಮಯ್ಯನು ಈ ಮಾತುಗಳನ್ನಾಡುತ್ತಾನೆ. "ಶಂಕರ, ಹೊರಗಿನ ಕಣ್ಣು ಮೋಸ ಮಾಡುತ್ತೆ. ನನಗೆ ದೃಷ್ಟಿಲಾಭವಾದದ್ದು ಕಣ್ಣು ಬಂದಾಗ ಅಲ್ಲ, ಹೋದಾಗ." ಈ ಮಾತಿನಲ್ಲಿಯೇ ಕಥೆಯ ತತ್ವ ಅಡಗಿರುವುದು. ದೃಷ್ಟಿಲಾಭ ಎನ್ನುವ ಹೆಸರಿನ ಔಚಿತ್ಯವಿರುವುದೇ ಆ ತತ್ವದಲ್ಲಿ. ಆ ಪದಕ್ಕೆ ಎರಡು ಅರ್ಥಗಳಿವೆ. ಒಂದು ಕಣ್ಣಿನ ನೋಟ ಬರುವುದು. ಮತ್ತೊಂದು ಒಳಗಣ್ಣು ತೆರೆಯುವುದು. ಈ ಒಳಗಣ್ಣೇ ನಿಜವಾದ ಕಣ್ಣು. ಅದರಿಂದ ಬರುವುದೇ ನಿಜವಾದ ದರ್ಶನ. ಈ ತತ್ವವನ್ನೂ ಕತೆಗಾರರು ಮುಚ್ಚು ಮರೆಯಿಲ್ಲದೆ ತಿಳಿಸಿದ್ದಾರೆ.

ಕತೆಗಳಲ್ಲಿ ನೀತಿಯನ್ನು ಬಹಿರಂಗವಾಗಿ, ವ್ಯಕ್ತವಾಗಿ ಹೇಳುವುದು ಕತೆಯ ಕಾಂತಿಯನ್ನು ಮಸುಳಿಸಿ ಬಿಡುತ್ತದೆ. ಆದರೆ ಶ್ರೀ ಎಂ ವಿ ಸೀ ಅವರ ಎಲ್ಲ ಲೇಖನದಲ್ಲಿಯೂ ಈ ಗುಪ್ತಗಾಮಿನಿಯ ಪ್ರಭಾವವಿದ್ದೇ ಇರುವುದರಿಂದ, ಲೇಖಕರ ವೈಶಿಷ್ಟ್ಯದಲ್ಲಿ ಅದನ್ನು ಸೇರಿಸಿಬಿಡಬಹುದು. ಮೊದಲ ಯೋಚನೆಗೆ ಈ ಕತೆಯು ಈ ಹೆಸರಿನಿಂದ ಪ್ರೇರಿತವಾಗಿರುವಂತೆ ತೋರುತ್ತದೆ. ಆದರೆ ಕುರಡನಾಗಿದ್ದ ಒಬ್ಬ ಸಂಗೀತಗಾರನನ್ನು ಕಂಡಾಗ ಕತೆ ತಾನಾಗಿಯೇ ಬೆಳೆದುಕೊಂಡು

ಹೋಯಿತೆಂದು ಕತೆಗಾರರೆನ್ನುತ್ತಾರೆ. ಈ ಕತೆ ಈ ಸಂಕಲನದಲ್ಲಿ ಅತ್ಯುತ್ತಮವಾ ಕತೆ.

ಇಲ್ಲಿ ಬರುವ ಬೈರಾಗಿ, ಅವನ ಔಷಧಿ, ಅದರ ಪರಿಣಾಮ ಇವೆ ಕಥೆಯ ವಾಸ್ತವತೆಯಿಂದ ದೂರವಾದರೂ ಕಥೆಯ ಅಂತರಾರ್ಥ ಪೋಷಣೆ ಅವಶ್ಯಕ. ಆದುದರಿಂದ ತಿರುಳನ್ನು ಮರೆತು "ಹೊಟ್ಟು ತಿರುಳಲ್ಲ"ವೆಂದ ಕತೆಗಾರನನ್ನು ಸರಿಯಾಗಿ ಅರ್ಥ ಮಾಡಿಕೊಂಡಂತಾಗುವುದಿಲ್ಲ. ಇಂಥ ಆವರಣ ಸೃಷ್ಟಿಯೇ ಆ ತತ್ವ ನಿರೂಪಣೆಗಾಗಿಯಲ್ಲವೆ.

## ತಾಯಿ-ಮಗ

ಇದೊಂದು ಅಪೂರ್ವ ಪ್ರಯೋಗ ಕನ್ನಡದಲ್ಲಿ. ಪಾಶ್ಚಾತ್ಯರಲ್ಲಿ ಕೆಲವು ನಾಟಕಗಳಲ್ಲಿಯೂ ಕೆಲವು ಕತೆಗಳಲ್ಲಿಯೂ ಹಿಂದೆಯೇ ಪ್ರಯೋಗಿಸಿರುವ ಒಂದು ಸನ್ನಿವೇಶವನ್ನು ಅಚ್ಚುಕಟ್ಟಾಗಿ ಈ ಕತೆಯಲ್ಲಿ ಕತೆಗಾರರು ಉಪಯೋಗಿಸಿದ್ದಾರೆ. ಹೆತ್ತಮಗು ಎದುರಿಗಿರದಿದ್ದರೂ, ಕಾಲ ಕಳೆದಂತೆಲ್ಲಾ ಆ ಮಗನು ಬೆಳೆಬೆಳೆದಂತೆ ಭಾವಿಸಿ ಕನಸಿನ ಮಗನನ್ನೇ ನಂಬಿ, ಭ್ರಮೆಯ ಲೋಕದಲ್ಲಿ ತೊಳಲಾಡಿ ಪ್ರತ್ಯಾಶೆಯಿಂದ ಆಹತಳಾಗಿದ್ದ ಯಮುನಮ್ಮನ ಚಿತ್ರ ಇಲ್ಲಿ ಚೆನ್ನಾಗಿ ರೂಪುಗೊಂಡಿದೆ. ಯಮುನಮ್ಮನ ಕತೆಯಲ್ಲಿ ಅವಳ ಮದುವೆ, ವಿಧವೆಯಾದುದು, ಭಂಡನಾದ ವೆಂಕಟಪತಿಯೊಡನೆ ಆಕೆಯ ಸಂಗ ಬೆಳೆದುದು, ಅದರ ಪರಿಣಾಮವಾಗಿ ಆಕೆ ಗರ್ಭಿಣಿಯಾದುದು,ಲೋಕಾಪವಾದವನ್ನು ತಪ್ಪಿಸಲು ಬೇರೆ ಊರಿಗೆ ಹೋಗಿ, ಆಕೆ ಹೆತ್ತ ಮಗುವನ್ನು ಬೇರೊಬ್ಬರಿಗೆ ಕೊಟ್ಟು ಆಕೆಗೆ ಸುಳ್ಳು ಹೇಳಿದುದು, ಅವಳಿಗೆ ಹುಚ್ಚು ಹಿಡಿದುದು, ಇವೆಲ್ಲ ಬಹು ಉಚಿತವಾಗಿ ಚಿತ್ರಿಸಲ್ಪಟ್ಟಿವೆ. ಈ ಕತೆಯಲ್ಲಿ ಶ್ರೀ ಎಂ. ವಿ. ಸೀ. ಅವರ ಕಥನಕಲೆ ತುಂಬ ಪರಿಣಾಮಕಾರಿಯಾಗಿದೆ.

ರಾಮು ಮದುವೆಯಾಗಿ ಮಾವನ ಮನೆಗೆ ಹೋಗುವುದು, ಅಲ್ಲಿ ಯಮುನಮ್ಮ ಇವನನ್ನು ತಬ್ಬಿಕೊಂಡು "ಬಂದೆಯಾ ಮಗನೇ" ಎಂದು ಉದ್ಗಾರತೆಗೆಯುವುದು, ರಾಮುವು "ನಾನೆಲ್ಲಿಯ ಮಗ ನಿನಗೆ" ಎಂದು ಚೀರಿಕೊಳ್ಳುವುದು, ಅವಳು ಆ ಕ್ಷಣ ಮಾತಿನ ರೀತಿಯಲ್ಲಿ ವ್ಯತ್ಯಾಸ ಮಾಡಿ ಖಿನ್ನವದನಳಾಗಿ ಕ್ಷಮಾಪಣೆ ಕೇಳುವುದು ಇವೆಲ್ಲ ಕತೆಗೆ ಬೇಕಾದ ಪೂರ್ವಸನ್ನಾಹವನ್ನು ಮಾಡುತ್ತವೆ. ಆಮೇಲೆ ಬರುವ ರಾಮುವಿನ ಯೋಚನೆ, ಯಾಕೆ ಯಮುನಮ್ಮನಿಗೆ ಹುಚ್ಚುವಾಸಿಯಾಗುವಂತೆ ಮಾಡಬಾರದು ಎನ್ನುವ ಉತ್ಸಾಹ,

ಇವುಗಳ ಪರಿಣಾಮವಾಗಿ ರಾಮು ವೈದ್ಯರಿಗೆ ಸಾಧ್ಯವಾಗದ್ದನ್ನು ಸಾಧ್ಯಮಾಡಲು ನಿಶ್ಚಯಿಸಿಬಿಡುತ್ತಾನೆ. ಇದಕ್ಕೆ ಮುಂಚೆ ರಾಮುವಿನ ಅಂತರಂಗದ ತುಮುಲ ವನ್ನೂ, ಮರುಕದ ನೂರು ಮೂಕ ವೇದನೆಗಳನ್ನೂ ಸಂಗ್ರಹವಾಗಿ ಚಿತ್ರಿಸಿರುವ ರೀತಿ ಚೆನ್ನಾಗಿದೆ.

ನಿಶ್ಚಯ ಮಾಡಿದ ಮೇಲೆ ಆ ಪ್ರಯೋಗದ ಪರಿಣಾಮ ರಾಮುವಿಗೆ ಸರಿಯಾಗಿಯೇ ಕಂಡರೂ ಇತರರಿಗೆಲ್ಲ ಏನೋ 'ತೊಳಸಂಬಟ್ಟೆ' ಯಾಯಿತೆಂದು ಕ್ರೋಧವುಂಟಾಗುತ್ತದೆ. ಇದರ ಚಿತ್ರಣವೂ ಚೆನ್ನಾಗಿಯೇ ಬಂದಿದೆ.

ಕತೆಯ ಅಂತ್ಯವೂ ಅಂತೆಯೇ ಉಚಿತವಾಗಿದೆ. ಯಮುನಮ್ಮನನ್ನು ಇನ್ನೂ ಹೆಚ್ಚು ದಿನ ಬದುಕಿರುವಂತೆ ಚಿತ್ರಿಸುವುದು ಕತೆಗೆ, ಜೀವನಕ್ಕೆ ಹಿಂಸ ಕಾರಿ. ಅಲ್ಲದೆ ಅನೇಕ ದಿನಗಳು, ಸುಮಾರು ೨೦ ವರ್ಷಗಳು ಈ ಕಷ್ಟದಲ್ಲಿ ನರಳಿದ ಯಮುನಮ್ಮನಿಗೆ ಈ ಶಾಂತಿ ಸಿಕ್ಕಿದ ಸಂದರ್ಭದಲ್ಲಿ ನಿಜವಾದ ಶಾಂತಿ ಒದಗಿ ಬಂದರೆ ಅದು ಆಶ್ಚರ್ಯವಲ್ಲ. ಕೊನೆಯಲ್ಲಿ–ಸಾಯುವುದಕ್ಕೆ ಮುಂಚೆ ಮತ್ತೆ "ರಾಮು ನಿಜವಾಗಿಯೂ ನನ್ನ ಮಗನೇ" ಎಂದುಕೊಳ್ಳುವ ಪ್ರಶ್ನೆಯಲ್ಲಿ ಯಮುನಮ್ಮನ ಯಾವಜ್ಜೀವಿತದ ಪ್ರತ್ಯಾಶೆಯೆಲ್ಲ ಮೊನೆಗೊಂಡು ಮಾತು ಹೊರ ಹೊಮ್ಮಿದೆ. ಅವಳ ವಾಸ್ತವ ಚಿತ್ರಕ್ಕೆ ಈ ವಾಕ್ಯವೇ ನಿಜವಾದ ಕೊನೆಯ ಮಾತು.

"ತಾಯಿ–ಮಗ" ಮತ್ತೊಂದು ಉತ್ತಮ ಕತೆ.

## ಗಂಡಿನ ಹೃದಯ

ಇಟ್ಯಾಲಿಯನ್ ಕತೆಯೊಂದರ ಅನುವಾದವಾದ ಈ ಕತೆ ಬಹ ಮಾಟವಾದ ಒಂದು ಸಣ್ಣ ಕತೆ. ಕತೆಯ ಪ್ರಾರಂಭ, ಮುಕ್ತಾಯ, ಪಾತ್ರಗಳು, ಘಟನೆ, ಆವರಣ ಭಾಷೆಯ ಶೈಲಿ ಎಲ್ಲದರಲ್ಲಿಯೂ ಚೊಕ್ಕವಾದ ಕಲಾಕೃತಿ ಇದು. ಇದರ ರಸಸ್ಥಾನವಿರುವುದು ಗೂಗ್ಲಿಲ್ಮೋ ಆನಾಳ ಸಂಗಡ ಮಾತುನಾಡು ವಾಗ. ನಿಜವಾಗಿ ಗೂಗ್ಲಿಲ್ಮೋವಿಗೆ ಆನಾಳ ಮೇಲೆಯೇ ಹೆಚ್ಚು ಪ್ರೇಮ. ಮೊದಲಿನಿಂದಲೂ ಅವಳನ್ನು ಮದುವೆಯಾಗುವ ಆಸೆಯಿಂದಲೆ ಒಡನಾಡಿ ಒಡ ಬೆಳೆದಿದ್ದನು ಗೂಗ್ಲಿಲ್ಮೋ. ತನ್ನ ಸ್ವಭಾವವನ್ನು ಮೀರಲು ಯಾವ ಕೆಲಸವನ್ನೂ ಮಾಡದ ಸೋಮಾರಿಯಾದ ಅವನಿಗೆ ಈಗ ಮೂವತ್ತು ವರ್ಷ. ಐದು ವರ್ಷಗಳ ಹಿಂದೆ ಐರೀನಳೊಡನೆ ಅವನಿಗೆ ಮದುವೆಯಾಗಿತ್ತು. ಅವಳೊಡನೆ ಸಂಸಾರ ಸುಖವೂ ಅಲ್ಲ, ದುಃಖವೂ ಅಲ್ಲವಾಗಿತ್ತು ಅವನಿಗೆ. ಈ ಮದುವೆಗೆ ಕಾರಣ

ಗೂಗ್ಲಿಲ್ಮೋವಿನ ತಾಯಿಯ ಬೋಧೆ ಅವಳಿಗೂ ಯಾವ ಅಸಾಧಾರಣವಾದ ಆಸೆಯೂ ಇರಲಿಲ್ಲ. ಒಟ್ಟನಲ್ಲಿ ಅವಳಿಗೆ ಆನಾಳ ತಾಯಿಯ ಬಡಾಯಿ ಒಗ್ಗಿ ಬರಲಿಲ್ಲ. ಅಲ್ಲದೆ ಐಶ್ವರ್ಯದಲ್ಲಿ ಇವಳಿಗೂ ಆನಾಳ ತಾಯಿಗೂ ಇದ್ದ ಅಂತರ ಈ ದೂರವನ್ನು ಇನ್ನೂ ಹೆಚ್ಚುಮಾಡಿತು. ಆನಾಳಂತಹ 'ಭ್ರಾಂತಿ' ಯನ್ನು ಕನಸಿನಲ್ಲಿಯೂ ನೆನೆಯಬಾರದೆಂಬ ತಾಯಿಯ ನಿರಂತರ ಉಪದೇಶ ವಾಕ್ಯಾವಳಿಯು ಗೂಗ್ಲಿಲ್ಮೋವಿನ ಮನಸ್ಸನ್ನು ಬೇರೆ ಕಡೆಗೆ ತಿರುಗಿಸಿಬಿಟ್ಟಿತು. ಐರೀನಳನ್ನು ಒಳ್ಳೆಯ ಗೃಹಿಣಿಯೆಂದೂ ಅನುಕೂಲವಂತಳೆಂದೂ ಆರೋಗ್ಯ ಶಾಲಿನಿಯೆಂದೂ ಮಗನಿಗಾಗಿ ಆರಿಸಿದವಳೂ ತಾಯಿಯೆ. ಅಂತೂ ಗೂಗ್ಲಿಲ್ಮೋವಿನ ಸೋಮಾರಿತನದ ಸಲುವಾಗಿ ಅವನು ಐರೀನಳನ್ನು ಮದುವೆ ಮಾಡಿಕೊಂಡಿದ್ದನು. ಇದೆಲ್ಲ ಹಳೆಯ ಕತೆ. ಈಗ ಐರೀನಳು ತನಗೆ ನೀಡಬಹುದಾದ ಸಂತಾನದ ವಾರ್ತೆಯನ್ನು ಕಾಯುತ್ತಾ ಕುಳಿತಿದ್ದನು ಗೂಗ್ಲಿಲ್ಮೋ.

ಗತಕಾಲದ ನೆನಪುಗಳು ಅವನನ್ನು ದೂರದೂರಕ್ಕೆ ಸೆಳೆದೊಯ್ದುವು. ಗತಕಾಲವೆಂದರಿನ್ನೇನು-ಆನಾತಾನೆ.ಅವಳ ಜೀವನದಲ್ಲಿ ಆಗಿದ್ದ ವ್ಯತ್ಯಾಸಗಳನ್ನೆಲ್ಲಾ ಅಳೆದನು–ತನ್ನ ನಿಟ್ಟಿನಿಂದ. ಮದುವೆಯಾಗದೆ ಅವಳು ಸ್ವತಂತ್ರಳಾಗಿದ್ದುದೇಕೆ ? ಇಪ್ಪತ್ತೇಳಾದರೂ ಅವಳ ಮದುವೆಯಾಗಿರಲಿಲ್ಲ. ಸುಮ್ಮನೆಯೇ ಪ್ರಯಾಣದಲ್ಲಿ ಆಸಕ್ತಿಯಿಟ್ಟಿದ್ದಳು; ಯಾವುದಾದರೂ ಕೆಲಸದಲ್ಲಿ ಮುಳುಗಿರುತ್ತಿದ್ದಳು. ಅವಳಿಗೆ ಐರೀನಳೊಂದಿಗೆ ಸ್ನೇಹ. ತನ್ನೊಡನೆಯೂ ಹೆಚ್ಚು ಮಾತಿಲ್ಲದಿದ್ದರೂ ಸ್ನೇಹಕ್ಕೆ ಚ್ಯುತಿಯಿರಲಿಲ್ಲ.

ಹೀಗೆ ಯೋಚಿಸುತ್ತಿರುವಾಗಲೆ ಆನಾ ಬರಬೇಕೆ–ಅವನ ಬಳಿಗೆ. ಮಾತು ಹೇಗೋ ಆನಾಳ ಮದುವೆಯ ಕಡೆಗೆ ತಿರುಗಿತು. ಅವಳು ಪೇಚಾಟಕ್ಕೆ ಸಿಕ್ಕಿಕೊಂಡಳು. ಅವಳ ಪ್ರತಿಯೊಂದು ಮಾತೂ ಗೂಗ್ಲಿಲ್ಮೋವಿಗೆ ಅವಳು ತನ್ನ ಮೇಲಿಟ್ಟಿದ್ದ ಗಾಢವಾದ ಪ್ರೇಮವನ್ನು ಪ್ರದರ್ಶಿಸಿತು. ಕೈ ಕುಲುಕುವಾಗ ಅವಳ ಕೈ ನಡುಗಿತು. ಅವನು ಅದನ್ನು ಇನ್ನೂ ಬಲವಾಗಿ ಅದುಮಿದನು. ಅವನ ಮಾತು–ಕಾರ್ಯ, ಪ್ರತಿಯೊಂದೂ ಅವನಿಗೇ ಆಶ್ಚರ್ಯವನ್ನುಂಟುಮಾಡಿತು. ಅವಳ ನಡೆನುಡಿ ಇವೆಲ್ಲವೂ ಅವನಿಗೆ ಅರ್ಥವಾಗಿದೆಯೋ ಇಲ್ಲವೋ ಎಂದು ಪರೀಕ್ಷೆ ಮಾಡುವಂತಿತ್ತು. ಗೂಗ್ಲಿಲ್ಮೋವಿಗೆ ಎಲ್ಲವೂ ಬೆಳ್ಳಂಬೆಳಕಾಯಿತು.

ಈ ಗತಪ್ರಪಂಚವನ್ನೆಲ್ಲ ಬೆಳಕುಹರಿದಂತಲ್ಲಾ ಅವನ ಚೇತನ ಹೊಸ ವಿಷಯಗಳನ್ನು ಅರ್ಥಮಾಡಿಕೊಳ್ಳತೊಡಗಿತು. ಆ ಸಮಯಕ್ಕೆ ಸರಿಯಾಗಿ ಅವನ

ಸಹಪಾಠಿ ಡಾಕ್ಟರು ಬಂದು ಹೆರಿಗೆಯು ಕಷ್ಟವಾಗಿರುವುದನ್ನೂ ತಾಯಿಯನ್ನೋ ಮಗುವನ್ನೋ ಇಬ್ಬರಲ್ಲಿ ಒಬ್ಬರನ್ನು ಮಾತ್ರ ಬದುಕಿಸುವುದು ಸಾಧ್ಯವಾಗಿರುವುದನ್ನೂ ತಿಳಿಸಿದನು.

ಒಂದು ನಿಮಿಷದಲ್ಲಿ ಅವನ ಮನಸ್ಸಿನಲ್ಲಿ ಕರ್ತವ್ಯಕ್ಕೂ ಪ್ರೇಮಕ್ಕೂ ನಡೆದ ದ್ವಂದ್ವ ಯುದ್ಧದ ಸಹಸ್ರ ಮುಖಗಳನ್ನು ವರ್ಣಿಸುವುದೆಂತು! ಕೊನೆಗೆ ಗದ್ದಿದ್ದು 'ಗಂಡಿನ ಹೃದಯ'-ಕರ್ತವ್ಯ ಬುದ್ಧಿ. ಗೂಗ್ಲಿಲ್ಮೋ "ತಾಯಿಯನ್ನು ಉಳಿಸಿಕೊಡಿ" ಎಂದು ಹೇಳಿದನು. ತನ್ನ ಹೃದಯದ ಪ್ರೋತ್ಸಾಹಕ್ಕೆ ಎದುರುಬಿದ್ದು ನುಡಿದಿದ್ದನು ಈ ಮಾತುಗಳನ್ನು.

ಈ ಚಿಕ್ಕ ಕತೆಯಲ್ಲಿ ಗಂಡಿನ ಹೃದಯವನ್ನು ಚಿತ್ರಿಸುವುದಕ್ಕಿಂತ ಹೆಚ್ಚಾಗಿ ಗಂಡಿನ ಕರ್ತವ್ಯಬುದ್ಧಿಯೇ ಚಿತ್ರಿತವಾಗಿದೆ. ಅಲ್ಲದೆ ಆನಾ, ಗೂಗ್ಲಿಲ್ಮೋವಿನ ತಾಯಿ ಇವರಿಬ್ಬರ ಹೆಣ್ಣು ಹೃದಯಗಳೂ ಚಿತ್ರಿತವಾಗಿವೆ. ಜೀವನವು ನಿರ್ಮಾಣ ಮಾಡುವ ಸಹಸ್ರ ಗೋಜುಗಳಲ್ಲಿ ಒಂದು ವಿಚಿತ್ರವಾದ ಧರ್ಮಸಂಕಟ ಇಲ್ಲಿ ವ್ಯಕ್ತಗೊಂಡಿದೆ. ಇದರಲ್ಲಿ ಗಂಡು ಗೆದ್ದು ಬರುತ್ತಾನೆ. ಮನಸ್ಸಿನ ಕಲ್ಪನೆಗೂ ಲೋಕದ ವಾಸ್ತವಿಕತೆಗೂ ಇರುವ ಅಂತರವನ್ನೂ ಸಂಸ್ಕೃತಿವಂತನ ನಡೆವಳಿಕೆ ಹಿಡಿಯುವ ಮಾರ್ಗವನ್ನೂ ಬಹು ಮಾರ್ಮಿಕವಾಗಿ ಈ ಕಥೆ ತಿಳಿಸುತ್ತದೆ. ಇದೊಂದು ಶ್ರೇಷ್ಠವಾದ ಕಲಾಕೃತಿ.

## ತಂತಿಕಿತ್ತ ಪಿಟೀಲು

ನಾಲ್ಕರಲ್ಲಿ ಒಂದು ತಂತಿಯಿಲ್ಲದೆ ಇದ್ದ ಪಿಟೀಲನ್ನು ನುಡಿಸುತ್ತಿದ್ದ ರಾಮಚಂದ್ರನು ತನ್ನ ಎದೆಯನ್ನು ತಟ್ಟಿ "ಈ ಪಿಟೀಲಿನ ಮೂರು ತಂತಿ ಕಿತ್ತು ಹೋಗಿದೆ. ಆದರೂ ನಡೆಯುತ್ತ ನುಡಿಯುತ್ತ ಇಲ್ಲವೆ ?" ಎಂದು ಪ್ರಶ್ನಿಸುತ್ತಾನೆ. ಇದು ಅವನ ಜೀವನಕ್ಕೆ ಅನ್ವಯಿಸುವ ಮಾತು.

ಸರಿಯಾಗಿ ಪರಿಶೀಲಿಸಿದರೆ ಈ ಸಂಗೀತಗಾರನ ಮಾತೆಲ್ಲ ರೂಪಕಾಲಂಕಾರದಲ್ಲಿಯೇ ನಡೆಯುತ್ತದೆ. ಅದಕ್ಕೆ ಹೊಂದಿಕೊಳ್ಳುವ ಹೆಸರು ಸನ್ನಿವೇಶಗಳನ್ನು ಕತೆಗಾರರು ಸೃಷ್ಟಿ ಮಾಡಿದ್ದಾರೆ. ಇಲ್ಲಿರುವ ವ್ಯಕ್ತಿಗಳು ಮೂವರೇ. ಹೂವಿನ ಹೆಸರು ತಿಳಿಯದಿದ್ದರೂ ಅದರ ಮಧುವನ್ನು ಹೀರಬಲ್ಲ ತುಂಬಿಯಂತೆ ರಾಗ ಮಧುಪನಾದ ಕತೆಗಾರ. ಶಾಸ್ತ್ರೋಕ್ತವಾಗಿ ಸಂಗೀತವನ್ನು ನುಡಿಸಿ ಅನುಭವಿಸಬಲ್ಲ ಪಿಟೀಲುಗಾರ. ಅದರ ಬೆಲೆಯನ್ನು ಕಟ್ಟಬಲ್ಲ ಶಾಸ್ತ್ರಿ. ಇಲ್ಲಿ ಶಾಸ್ತ್ರಿಗೆ

ಕೆಲಸವೇ ಇಲ್ಲ. ಆದರೂ ಬಟ್ಟೆಯನ್ನು ತಗುಲುಹಾಕುವುದಕ್ಕೆ ಒಂದು ಮೊಳೆ ಬೇಡವೆ!

ಜೀವನದಲ್ಲಿ ಬೇಸರಗೊಂಡು ಹೆಂಡತಿಯನ್ನು ಕಳೆದುಕೊಂಡು ಪಿಟೀಲು ನುಡಿಸಿ ಭಿಕ್ಷೆ ಬೇಡಿ ಜೀವನ ಮಾಡುತ್ತಿದ್ದ ರಾಮಚಂದ್ರನ ಜೀವಿತದ ಪೂರ್ಣ ಚಿತ್ರವಿಲ್ಲಿ ಬಂದಿಲ್ಲ. ಅದೆಲ್ಲ ಅಸ್ಪಷ್ಟ. ಕತೆಗಾರನು ತನ್ನ ನೆನಪಿನಿಂದ ಮತ್ತೆ ಕೂಡಿಸಿದ ಅವ್ಯಕ್ತ ಚಿತ್ರ. ಸಂಗೀತಗಾರನ ಮಾತೆಲ್ಲ ಅರ್ಥವತ್ತಾದುದು. ಅವನ ಜೀವನದಲ್ಲಿ ಹೇಳಿಕೊಳ್ಳಬಾರದ್ದೇನೂ ಇರಲಿಲ್ಲ. ಆದರೆ ಹೇಳಿ ಮುಗಿಸುವುದಕ್ಕಾಗುವುದಲ್ಲ ಅದು. ಅವನ ಪ್ರಿಯವಾದ ರಾಗ ಲಲಿತ. ಅದನ್ನು ಹೆಚ್ಚು ಹೊತ್ತು ನುಡಿಸಲಾರ. "ಲಲಿತ ನನ್ನ ಬಳಿ ಹೆಚ್ಚು ಹೊತ್ತು ಇರುವುದಿಲ್ಲ. ಓಡಿ ಹೋಗಿ ಬಿಡುತ್ತಾಳೆ, ಚಂಚಲೆ ಸ್ವಾಮಿ" ಎನ್ನುವ ಮಾತಿನಲ್ಲಿ ಒಳಗನ್ನೆಲ್ಲಾ ಹಿಂಡಿ ಬಿಡುವ ಯಾವುದೋ ತೀವ್ರಘಾತದ ಪ್ರತಿಧ್ವನಿ ನಮ್ಮಲ್ಲಿಯೂ ಗುಡುಗುತ್ತದೆ.

ಆದರೆ ಈ ಅಸ್ಪಷ್ಟತೆಯಿಂದ ಕತೆಗಾರರ ನೆನಪು ತನ್ನ ಬಾಲ್ಯದ ರಾಮಚಂದ್ರ, ಅವನ ಸಂಗೀತ-ಲಲಿತ ಎಂಬ ಹೆಂಡತಿ-ತಂತಿಕಿತ್ತ ಪಿಟೀಲು-ಬೆಳ್ಳಿಯ ತಗಡು-ಅದರಲ್ಲಿ ಇವರಿಬ್ಬರ ಹೆಸರು ಇವೆಲ್ಲದರಿಂದ ಒಂದು ಕತೆಯನ್ನು-ದುರಂತ ಕತೆಯನ್ನು ಸೃಷ್ಟಿಸಿತು. ಅಷ್ಟಾದರೂ ಒಗಟು ಒಗಟಾಗಿಯೇ ಉಳಿಯುತ್ತದೆ.

ಈ ಒಗಟನ್ನು ಬಿಡಿಸಲಾರದ ಗಂಟಾಗಿ ಉಳಿಸಿಕೊಂಡಿರುವುದರಲ್ಲಿಯೇ ಈ ಕತೆ ತನ್ನ ಮೇಲ್ಮೆಯನ್ನು ಮೆರೆಯುತ್ತದೆ. ಕತೆಯ ಹೆಸರು "ತಂತಿಕಿತ್ತ ಪಿಟೀಲು." ಆದರೂ ಇದರಿಂದ ಹೊಮ್ಮುವ ಸಂಗೀತದಲ್ಲಿ ಯಾವ ಅಪಶ್ರುತಿಯೂ ಇಲ್ಲ. ಮಧುಮಧುರವಾದ ಗಾಯನ ಇನ್ನೂ ಕೇಳಿಬರುತ್ತಿದೆ. ಬೀದಿಯಲ್ಲಿ ಯಾವ ಚೌಕದಲ್ಲಿ ಯಾವ ವಾದ್ಯಗಾರನನ್ನು ನೋಡಿದರೂ ಈ ಕತೆಯನ್ನು ಓದಿರುವವರಿಗೆ ಇದರ ನೆನಪು ಬರದಿರುವುದಿಲ್ಲ.

## ಮೋಡದ ದಿಬ್ಬಣ

ಇದನ್ನು ಕತೆಯೆನ್ನುವುದಕ್ಕಿಂತ ಒಂದು ಗದ್ಯಕವನವೆನ್ನುವುದು ಉಚಿತ. ಇಲ್ಲಿ ಭಾವಪ್ರಧಾನವಾಗಿರುವ ಒಂದು ಸನ್ನಿವೇಶವನ್ನು ಕವಿಗಳು ಚಿತ್ರಿಸಿದ್ದಾರೆ. ಇಲ್ಲಿ ಕಾಣುವುದು ಕತೆಗಾರರಲ್ಲ-ಕವಿ ಎಂ.ವಿ.ಸೀ. ಮೋಡವನ್ನು ನೋಡುತ್ತ ನೋಡುತ್ತ ಕರಿಯನು ಕಾಣುವ ಕನಸು-ಹಗಲುಗನಸು ಬಲು ಸವಿಯಾದುದು. ಬಾನಿನ ಅಗಲಕ್ಕೂ ಹರಡಿರುವ ಮುಗಿಲ ಮುಂದೆ ಅವನಿಗೆ ತನ್ನ ಸ್ವಂತದ ಕುರಿ ಮುಂದೆಯಾಗಿಬಿಡುತ್ತದೆ. ತನ್ನ ಜೊತೆ ಕೈಹಿಡಿದ ಹೆಂಡತಿ-ಗೌಡರ ಮಗಳು

ಗೌರಿ. ಈ ಮನಸ್ಸಿನ ಮಾಟದ ಮೋಡಿಯಲ್ಲಿ ಬೆರಗಾಗಿ ಎಚ್ಚತ್ತರೆ ಅವನಿಗೆ ಕಾಣುವುದೇನು ? ಅತಿ ವ್ಯತಿರಿಕ್ತವಾದ ವಾಸ್ತವ ಸ್ಥಿತಿಗತಿಗಳು. ತಾನು ಕೇವಲ ಕುರಿ ಕಾಯುವ ಹೈದ.

ಆದರೆ ಅವನಿಗೆ ಒಂದು ನೆನಪಿತ್ತು. ಬಾಲ್ಯದಲ್ಲಿ ಗೌರಿಯೊಡನೆ ತಾನೂ ಆಟವಾಡಿದ್ದನು. ಈಗ ಬೆಳೆದ ಮೇಲೆ ಗೌರಿ ತನ್ನ ಬಳಿಗೆ ಸುಳಿಯದಿದ್ದರೂ ಹಿಂದಿನ ಸಂಗತಿಯನ್ನು ಅವಳೂ ಮರೆತಿರಲಿಕ್ಕಿಲ್ಲ. ಅವಳಿಗೆ ತಾನು ಸೇವಂತಿಗೆ ಹೂಗಳನ್ನು ತಂದು ಚಿನ್ನದ ಒಡವೆಯೆಂದು ಕೊಟ್ಟಿರಲಿಲ್ಲವೆ ? ನಾಗರಿಕನಂತೆ ಹೆಚ್ಚು ಸ್ವಾತಂತ್ರ್ಯ ವಹಿಸಿರಲಿಲ್ಲ, ನಿಜ. ಆದರೆ ಪ್ರೇಮದ ಸೂಚನೆ ದೊರೆತಿರಲಿಲ್ಲವೆ, ಗೌರಿಗೆ ?

ಗೌರಿಯ ಮದುವೆಯ ಮಾತು ಮನೆಯಲ್ಲಿ ಪ್ರಾರಂಭವಾದಾಗ ತಾನೂ ಏಕೆ ಹೋಗಿ ಗೌಡರನ್ನೇ ಕೇಳಬಾರದು ಎಂದುಕೊಂಡ ಕರಿಯ. ಧೈರ್ಯ ಮಾಡಿ ಕೇಳಿಯೂ ಕೇಳಿದ. ಗೌಡರೂ ಕೋಪಮಾಡಿಕೊಳ್ಳದೆ ತಮ್ಮ ಮನಸ್ಸಿನ ನಿಶ್ಚಯವನ್ನು ತಿಳಿಸಿಬಿಟ್ಟರು. ಅವರ ಚಿತ್ತ ಬೇರೆ ಗಂಡನ್ನು ಹುಡುಕಿಟ್ಟು ಕೊಂಡಿತ್ತು.

ಗೌರಿಗೆ ಮದುವೆಯಾಯಿತು. ಗಂಡನ ಮನೆಗೆ ದಿಬ್ಬಣ ಹೋದಳು. ಕರಿಯ ಮಾತ್ರ ಹುಲ್ಲುಗಾವಲಿನಲ್ಲಿ ಮಲಗಿ ನಿದ್ದೆಯಲ್ಲಿ ಮುಳುಗಿದ್ದನು. ಎದ್ದಾಗ ಮತ್ತೆ ಮುಗಿಲ ದಿಬ್ಬಣ ಕಂಡಿತು. ಪುನಃ ಹಗಲುಗನಸು ಕಂಡ. ಮುಗಿಲೆಲ್ಲ ಕುರಿಮಂದೆಯಾಯಿತು. ಆದರೆ ಕೈಹಿಡಿದ ಹೆಂಡತಿ ಬಳಿಯಿರಲಿಲ್ಲ.

ಇದು ಈ ಗದ್ಯಚಿತ್ರದ ಸೂಕ್ಷ್ಮ ಸ್ವರೂಪ. ಇಲ್ಲಿಯೂ ಪರಸ್ಪರ ಪ್ರೇಮವಿಟ್ಟಿದ್ದ ಎಳೆಯರನ್ನು ವಿಧಿ ಬೇರೆ ಬೇರೆ ಮಾಡಿಬಿಡುತ್ತದೆ. ಗೌಡರಾಗಲಿ, ಕರಿಯನಾಗಲಿ ಗೌರಿಯನ್ನು ಕರೆಸಿ ಕೇಳಿದ್ದರೆ ಏನಾಗುತ್ತಿತ್ತೆನ್ನುವುದು ಊಹೆಗೆ ಬಿಟ್ಟ ಮಾತಾಗಿಬಿಡುತ್ತದೆ.

ಇದು ಕತೆಯಲ್ಲದಿದ್ದರೂ ರಸಮಯವಾದ ಒಂದು ಭಾವಚಿತ್ರ.

## ಸುಂದರ ಪರಿವರ್ತನೆ

ಈ ಕಥಾಸಂಕಲನದಲ್ಲಿ ತುಂಬ ವಿಸ್ತಾರವಾಗಿರುವ ಕತೆ ಸುಂದರ ಪರಿವರ್ತನೆ. ಲಕ್ಷ್ಮಮ್ಮನ ಜೀವನದಲ್ಲಿ ಅಂತರಂಗ ಬಹಿರಂಗಗಳಲ್ಲಿ ಎರಡರಲ್ಲಿಯೂ ವ್ಯತ್ಯಾಸಗಳು ಕಂಡುಬಂದಿದ್ದುವು. ಅವಳ ಕತೆ ಬಹಳ ವ್ಯಸನಕಾರಿಯಾದುದು.

ಈ ಘಟನೆ ನಡೆದದ್ದಕ್ಕೂ ಈ ಕತೆ ಪ್ರಾರಂಭವಾಗುವುದಕ್ಕೂ ಮಧ್ಯೆ ಹದಿನೆಂಟು ವರ್ಷಗಳ ಅವಧಿ ಸಂದಿದೆ.

ಮದುವೆಯಾದ ಕೆಲತಿಂಗಳೊಳಗೇ ಲಕ್ಷ್ಮಮ್ಮ ವಿಧವೆಯಾದಳು. ಪೂರ್ವಾಚಾರ ಸಂಪ್ರದಾಯಗಳಲ್ಲಿ ನಂಬಿಕೆಯುಳ್ಳ ತಾಯಿ, ಅಣ್ಣ, ಇವರಿಬ್ಬರ ಬಲವಂತದಿಂದ ಅವಳಿಗೆ "ಮಡಿ"ಯೂ ಆಯಿತು. ಅಣ್ಣನ ಮನೆಯಲ್ಲಿ ಅತ್ತಿಗೆಯ ಕೈಕೆಳಗೆ ಕಷ್ಟದ ಅನುಭವ ಕೆಲವು ದಿನ. ಆ ಬಳಿಕ ಪಾವೆಯಲ್ಲಿ ಅಣ್ಣನೇ ಆದ ನಾರಾಯಣರಾಯರೆಂಬೊಬ್ಬರ ಮನೆಯಲ್ಲಿ ಅಡಿಗೆಯ ಕೆಲಸ ಮಾಡಿಕೊಂಡು ಕೆಲವು ದಿನ. ಇಷ್ಟಾಗುತ್ತಿದ್ದಾಗ ರಾಮು ಅವಳಿಗೆ ಕಥೆ ಓದಿ ಹೇಳುತ್ತಾ ಇದ್ದುದು; ಅವಳ ಚಿತ್ರವನ್ನು ಬರೆದು, ಅದರಲ್ಲಿ ಕೇಶರಾಶಿಯನ್ನೂ ಬಿಡಿಸಿ ಚಿತ್ರದ ಕೆಳಗೆ "ಹೀಗಿದ್ದಿದ್ದರೆ?" ಎಂದು ಬರೆದಿಟ್ಟುದು, ಇಷ್ಟೂ ಕತೆಗೆ ಹಿನ್ನೆಲೆಯಾಗಿದೆ. ಇದರ ಪರಿಣಾಮವಾಗಿ ಅವಳಲ್ಲಿ ಮೊಳೆತ ಆಸೆ; ತಾಯಾಗುವ ಆಸೆ. ಮುಡಿಯಿಲ್ಲದಿದ್ದರೆ ಹಾಗಾಗುವುದು ಅಸಾಧ್ಯವಾಗಿರುವುದು ಇತ್ಯಾದಿ ಅವಳ ಮನಸ್ಸಿನಲ್ಲಿ ಹೊಳೆಯಿತು. ಒಬ್ಬ ಸ್ಕೂಲು ಮಿಸ್ಟ್ರೆಸ್ ಸ್ನೇಹಿತಳಾಗಿ ಅವಳಿಗೆ ಈ ಆಸೆಯನ್ನು ತೀರಿಸಿಕೊಳ್ಳಲು ಆಶ್ರಯವಿತ್ತಳು. ಒಬ್ಬ ಸಿರಿವಂತ ಆ ಸ್ಕೂಲು ಮಿಸ್ಟ್ರೆಸ್ಸಿನ ಮನೆಗೆ ಬಂದು ಹೋಗುತ್ತಿದ್ದನು. ಅವನಿಗೆ ಲಕ್ಷ್ಮಮ್ಮನ ಮೇಲೆಯೂ ಮೋಹವುಂಟಾಗಿ ಅವನು ಇವರಿಬ್ಬರಿಗೂ ಬೇರೆ ಬೇರೆ ಏರ್ಪಾಟು ಮಾಡಿಕೊಟ್ಟನು. ಆದರೆ ಲಕ್ಷ್ಮಮ್ಮ ಗರ್ಭಿಣಿಯಾಗಿ ಆಸ್ಪತ್ರೆಗೆ ಹೋಗಬೇಕಾದಾಗ ಆತ ಕೈಬಿಟ್ಟನು. ಎರಡು ತಿಂಗಳು ಆಸ್ಪತ್ರೆಯಲ್ಲಿ ಇವಳನ್ನು ಅನಾಥಳೆಂದು ಇಟ್ಟುಕೊಂಡಿದ್ದರು. ಇವಳು ಹಿಂದಿರುಗಿದ್ದುದು ಮತ್ತೆ ಅದೇ ವಿಲಾಸಕ್ಕೆ, ಅದೇ ಸಿರಿವಂತನ ಆಶ್ರಯಕೆ. ಆದರೆ ಮಗುವಿಗೆ ಐದು ವರ್ಷ ತುಂಬುವ ಹೊತ್ತಿಗೆ ಅವನೂ ಸತ್ತುಹೋದನು. ಈಗ ಲಕ್ಷ್ಮಮ್ಮ ನಿಜವಾಗಿ ವಿಧವೆಯಾದಳು.

ಮುಂದೆ ಹೇಗೆ ಮಗಳು ಸರಳೆಯನ್ನು ಬೆಳಸಿ ಹನ್ನೆರಡು ವರ್ಷದವಳನ್ನಾಗಿ ಮಾಡಿದ್ದಳು. ಅವಳ ಜೀವನ ಹೇಗೋ ಕತೆ ಅದರ ವಿವರಣೆಯನ್ನು ಕೊಡುವುದಿಲ್ಲ. ಅಂತೂ ಮಗಳಿಗೆ ಮದುವೆಮಾಡಿ ಮತ್ತೆ ನಂಜನಗೂಡಿನಲ್ಲಿ ಹರಕೆಯನ್ನೊಪ್ಪಿಸುವ ಸಲುವಾಗಿ ಅವಳು ಹೋಗಿರಬಹುದೇನೋ ಎಂದು ಕತೆಗಾರರು ಕಥೆಯನ್ನು ಕೊನೆಗಾಣಿಸುತ್ತಾರೆ.

ಕತೆ ಬಿಡಿಬಿಡಿಯಾಗಿ ಮುಂದುವರಿಯುತ್ತದೆ. ಕತೆಯ ವಸ್ತು ಹಳೆಯದೇ; ಯಾವ ಸಂಶಯವೂ ಇಲ್ಲ. ಹಾಗೆ ನೋಡುವುದಾದರೆ ಎಲ್ಲ ಕತೆಯೂ

ಹಳೆಯದೆ--ಅದರಲ್ಲಿಯೂ ಶೃಂಗಾರದ ಕತೆಗಳಾದರೆ. ಗಂಡು ಹೆಣ್ಣಿನ ಮೋಹ, ಅದರ ಪರಿಣಾಮ–ಇದರ ಸಾವಿರ ಮುಖಗಳು. ಆದರೆ ಇಲ್ಲಿ ತಾಯ್ತನದ ಹಂಬಲು ಬೆಳೆಯುವುದಕ್ಕೆ ಒಂದು ಪರಿಷ್ಕಾರವಾದ ಆವರಣವನ್ನು ಸೃಷ್ಟಿಸಿದ್ದಾರೆ. ಕತೆಗಾರರು ಕತೆಗಳನ್ನು ಓದುವುದು, ಚಿತ್ರವನ್ನು ಕಾಣುವುದು, ನಾರಾಯಣ ರಾಯರ ಸಂಸಾರದಲ್ಲಿ ತಾಯಿಮಕ್ಕಳ ಸರಸಗಳಲ್ಲಿ ಭಾಗವಹಿಸುವುದು, ಇವೆಲ್ಲ ಲಕ್ಷ್ಮಮ್ಮನ ಮೇಲೆ ಪರಿಣಾಮಮಾಡಿದ್ದರಲ್ಲಿ ಆಶ್ಚರ್ಯವಿಲ್ಲ. ಅವಳಿಗೆ ಸಿಕ್ಕಿದ ಸ್ಕೂಲು ಮಿಸ್ಟ್ರೆಸ್ಸಿನ ಉಪದೇಶ ಸಹವಾಸಗಳು ಅವಳಿಗೆ ಸಹಾಯಕವಾಗಿರಬೇಕು. ಅಂತೂ ಲಕ್ಷ್ಮಮ್ಮ ಕೇಸರಿನಲ್ಲಿ ಬಿದ್ದಳು. ಆದರೂ ಕಮಲವಾದಳು ರೂಪಿನಲ್ಲಿ.

ಈ ಕತೆಯಲ್ಲಿ ನಾವು ಮೆಚ್ಚುವುದು ಕತೆಗಾರರ ಕನಿಕರ ದೃಷ್ಟಿಯನ್ನು ಮಾತ್ರ. ಲಕ್ಷ್ಮಮ್ಮನೂ ತನ್ನ ತಾಯ್ತನಕ್ಕೆ ಕಾರಣರಾದವರ ವಿಷಯದಲ್ಲಿ ತುಂಬ ಗೌರವದಿಂದಲೇ ಮಾತನಾಡುತ್ತಾಳೆ. ಅವಳಿಗೆ ಅದೇ ಪಂಕದಲ್ಲಿ ಬಿದ್ದಿರ ಬೇಕೆಂಬ ಆಸೆಯಿಲ್ಲ. ಈಗ ಅವಳ ಮಗಳು ದೊಡ್ಡವಳು. ಮಕ್ಕಳನ್ನು ಕಾಣುವ ಸಾಕುವ ಸುಖವನ್ನು ಅವಳು ಪಡೆದಿದ್ದಳು. ಇನ್ನು ಪರಮಾರ್ಥ ದೃಷ್ಟಿ. ಇದರಲ್ಲಿ ಅಡಗಿದೆ ಅವಳ ಪಾತ್ರ.

ಈ ತಾಯಿ ಮಕ್ಕಳ ಚಿತ್ರವನ್ನೂ ಕತೆಗಾರರು ಭವ್ಯವಾಗಿ ಬಣ್ಣಿಸಿದ್ದಾರೆ. "ಸೃಷ್ಟಿಕರ್ತನು ಬರೆದ ಚಿತ್ರವನ್ನು ಆಟಕ್ಕಾಗಿ ತಾನೆ ಕೆಡಿಸಿ, ಅದನ್ನು ತಿದ್ದಿ ಬರೆದು, ಚೆನ್ನಾದ ಚಿತ್ರಕ್ಕೆ ಹಿಗ್ಗಿ ಅದೂ ಚೆನ್ನಾಗಿಲ್ಲವೆಂದು ಅದೇ ಮಾದರಿಯಲ್ಲಿ ಮತ್ತೊಂದು ಚಿತ್ರವನ್ನು ಬರೆದಂತಿತ್ತು ಈ ತಾಯಿ ಮಕ್ಕಳ ಚಿತ್ರ."

"ಸುಂದರ ಪರಿವರ್ತನೆ" ಯೆನ್ನುವುದು ಲಕ್ಷ್ಮಮ್ಮನು ಕೂದಲು ಬೆಳಸಿದ ವಿಷಯಕ್ಕೆ ಮಾತ್ರ ಅನ್ವಯಿಸುವುದಿಲ್ಲ. ಸರಳೆಯೂ ಲಕ್ಷ್ಮಮ್ಮನ ಪರಿವರ್ತನೆಯೇ ಅಲ್ಲವೆ? ಈ ಕತೆಗೆ ಒಂದು ವಾಸ್ತವಿಕವಾದ ಅಂಶವೇ ತಳಹದಿಯೆಂದರೆ ಯಾರೂ ನಂಬದಿರಬಹುದು. ಆದರೆ ಅದು ನಿಜ. ಕತೆಗಾರರು ಈ ವಾಸ್ತವ ಚಿತ್ರವನ್ನು ಕತೆಗೆ ಅಚ್ಚುಕಟ್ಟಾಗಿ ಹೊಂದಿಸಿಕೊಂಡು ಅದನ್ನು ಸುಂದರವಾಗಿ ಸಂವರ್ತಿಸಿದ್ದಾರೆ. ಇದೇ ತಾನೆ ಕಥನಕಲೆ; ಕತೆಯ ಜೀವಾಳ!

## ನೀಲಿಯ ಕವರು

ನವದಂಪತಿಗಳ ಜೀವನದಲ್ಲಿಯೂ ಬದುಕೆಲ್ಲ ಹಸುರಾಗಿ ಹಸನಾಗಿರುವಾಗಲೂ, ಪ್ರೇಮಾತಿಶಯವೇ ಹೇಗೆ ಅಶ್ಯಲ್ಪ ವಿಷಯಗಳಲ್ಲಿ ಪ್ರಮಾದಗಳನ್ನುಂಟುಮಾಡುತ್ತದೆನ್ನುವುದು ಈ ಕತೆಯಲ್ಲಿ ಚಿತ್ರಿತವಾಗಿದೆ. ಯಾವುದಕ್ಕೂ

ಸ್ವಲ್ಪ ವ್ಯವಧಾನ, ಪೂರ್ವಾಪರ ವಿವೇಚನೆ ಇದ್ದರೆ ಲೋಕದಲ್ಲಿ ಎಷ್ಟೋ ಅನಾಹುತಗಳು ತಪ್ಪಿಹೋಗುತ್ತಿದ್ದುವು. ಅದಿಲ್ಲದಿದ್ದಾಗ ಎತ್ತು ಈಯಿತೆಂದರೆ ಕೊಟ್ಟಿಗೆ ಹುಡುಕುವ ಬುದ್ಧಿವಂತಿಕೆಯಲ್ಲಿ ಯಾವ ಯಾವುದೋ ಗೋಜುಗಳು ಬಾಳಿನ ಸೋಣವನ್ನು ಜೇಡನ ಬಲೆಯಲ್ಲಿ ನೂಕಿಬಿಡುತ್ತದೆ. ಬಿಡಿಸಿಕೊಂಡು ಬರುವುದು ಅಸಾಧ್ಯವೆನ್ನುವಷ್ಟು ಮಟ್ಟಿಗೆ ಇದು ಸಮಸ್ಯೆಗಳನ್ನು ತಂದೊಡ್ಡಿ ಬಿಡುತ್ತದೆ. ಇಲ್ಲಿ ಅಂತಹ ಭಾರಿ ಸಮಸ್ಯೆ ತಲೆದೋರಿಲ್ಲ.

ಸುಂದರೇಶ ಇಂದಿರೆಯರ ನವದಾಂಪತ್ಯ ಎಲ್ಲ ವಿಧದಲ್ಲಿಯೂ ಸುಖಮಯ ವಾಗಿತ್ತು. ಗಂಡನ ಆಯಾಸ, ಹೆಂಡತಿಯ ಮಂದಹಾಸದ ಮಧುಪರ್ಕ, 'ಉಸ್ಸಪ್ಪಾ' ಎನ್ನುವ ಹೊತ್ತಿಗೆ 'ಉಪ್ಪಿಟ್ಟು' ಇವೆಲ್ಲ ಇದ್ದೇ ಇದ್ದುವು. ಆದರೆ ಸುಂದರೇಶನ ಸ್ನೇಹಿತ ಮೂರ್ತಿ ಮದುವೆಯಾದವಳ ಹೆಸರೂ ಇಂದಿರೆ ಎಂದೇ ಇದ್ದರೆ ಅನನದೇನು ತಪ್ಪು! ಅವನು ಅವಳಿಗೆ ಬರೆದ ಪತ್ರವನ್ನು ಸುಂದರೇಶನಿಗೆ ಅಚಾತುರ್ಯದಿಂದ ರವಾನಿಸಿಬಿಟ್ಟ, ಕವರನ್ನು ಸುಂದರೇಶನ ಇಂದಿರೆ ಹುರಿಗಾಳು ಹಾಕಿಟ್ಟು ಪತ್ರವನ್ನು ಪತಿಗೇ ತೋರಿಸಬೇಕೆಂದಿದ್ದಳು. ಆದರೆ ಅದಕ್ಕಿಂತ ಮುಂಚೆಯೇ ಪತ್ರವನ್ನು ನೋಡಿದ ಸುಂದರೇಶ ಕಿಡಿಕಿಡಿಯಾಗಿ ಮನೆ ಬಿಟ್ಟು ಹೊರಟ—ಲಾಲ್‌ಬಾಗಿಗೆ. ಸಿಕ್ಕಿದರೆ ಬಡಿದು ಹಾಕುವಷ್ಟು ಕೋಪ ಈ ಮೂರ್ತಿಯನ್ನು. ಈ ಕೋಪ ಮೂರು ನಾಲ್ಕು ದಿನಗಳವರೆಗೂ ಇದ್ದೇ ಇತ್ತು. ಮತ್ತೆ ಮೂರ್ತಿಯ ಕಾಗದ ಬಂದ ಮೇಲೆಯೇ ಇವರಿಬ್ಬರ ಮನಸ್ಸು ಹದಕ್ಕೆ ಬಂದದ್ದು.

ನಿಷ್ಕಾರಣವಾಗಿ ಈ ವಿರಸ ಉಂಟಾಗಲಿಲ್ಲ. ಹೆಸರು ಇಂದಿರಾ ಎಂದಾಗಿ ಇಬ್ಬರು ಹೆಂಗಸರಿರುವುದು: ಪತ್ರ ಬರೆದವನು ಅದಲು ಬದಲು ಮಾಡಿ ವಿಳಾಸ ಬರೆಯುವುದು ಇದೇ ಕಾರಣವಾಗಿ ಈ ವಿರಸ ಬಂದು ಸರಸದಲ್ಲಿ ಕೊನೆಗಾಣುತ್ತದೆ ಕತೆ. ಈ ಕತೆಯಲ್ಲಿ ಒಂದು ದೊಡ್ಡ ಕುಂದೆಂದರೆ ಸುಂದರೇಶನಿಗೆ ತನ್ನೊಡನೆ ಪತ್ರ ವ್ಯವಹಾರವನ್ನಿಟ್ಟುಕೊಂಡಿದ್ದ ಸ್ನೇಹಿತನಾದ ಮೂರ್ತಿಯ ಬರೆವಣಿಗೆ ಗೊತ್ತಾಗದೆ ಇದ್ದುದು. (ಸ್ನೇಹಿತನ ಬರವಣಿಗೆ ಪರಿಚಿತವಾಗಿರಬಹುದು. ಆದರೆ, ಪತ್ರದ ತಲೆಯ ಮೇಲೆ ಹೆಂಡತಿಯ ಹೆಸರು. ಹೆಂಡತಿಯನ್ನು ಮನಸಾರ ಪ್ರೀತಿಸುವ ಗಂಡನಿಗೆ ಸಹಜವಾದ ಅಸೂಯೆಯ ಆವೇಶದಲ್ಲಿ ಉಳಿದ ಯಾವುದೂ ಗಮನಕ್ಕೆ ಬಾರದು-ಎಂದು ಲೇಖಕರು ಸಮಾಧಾನ ಕೊಡಬಹುದೇನೊ!) ಈ ತಪ್ಪೊಂದನ್ನು

ಒಪ್ಪಿದರೆ ಕತೆ ಸ್ವಾರಸ್ಯ ಪೂರ್ಣವಾಗಿದೆ ಎನ್ನಬೇಕು. ಇದ್ದದ್ದರಲ್ಲಿ ಹಾಸ್ಯ ಮಯವಾಗಿರುವುದು ಇದೊಂದೇ ಕತೆ ಈ ಸಂಗ್ರಹದಲ್ಲಿ.

### ಇತರ ಕತೆಗಳು

ಮೇಲೆ ವಿವರಿಸಿದ ಕತೆಗಳನ್ನು ಬಿಟ್ಟರೆ ಉಳಿದ ಕತೆಗಳಲ್ಲಿ ಅಷ್ಟು ಸ್ವಾರಸ್ಯವಿಲ್ಲ. 'ನೂರವಲವತ್ತೆರಡು' ಅತಿ ವಿಸ್ತಾರವಾದ ಪೀಠಿಕೆಯಿಂದ ಕೂಡಿ ಕತೆಯ ಗುರಿಯನ್ನು ನೇರವಾಗಿ ಸಾಧಿಸುವುದಿಲ್ಲ. ಮೂಗಿಗಿಂತ ಇಲ್ಲಿ ಮೂಗುತಿಯೇ ಭಾರವಾಗಿದೆ.

'ನಿಷ್ಪ್ರಯೋಜಕ'ದಲ್ಲಿ ಸೀನಪ್ಪನ ಪಾತ್ರಪೋಷಣೆ ತಕ್ಕಷ್ಟು ಚೆನ್ನಾಗಿ ಬಂದಿದೆ. ಆದರೂ ಅಲ್ಲಿ ಕತೆಯಲ್ಲಿರಬೇಕಾದ ಏಕಕೇಂದ್ರಸ್ಥವಾದ ಆಸಕ್ತಿಯುಂಟಾಗುವುದಿಲ್ಲ; ಯುದ್ಧದ ಪರಿಣಾಮದ ವಿಷಯದಲ್ಲಿ ವ್ಯಂಗ್ಯವಾದ ಚಿತ್ರ ದೂರವಾಗಿ ಧ್ವನಿತವಾಗುತ್ತದೆ, ಅಷ್ಟೆ. ಆದರೆ ನಿಷ್ಪ್ರಯೋಜಕನು ಸಂಸಾರಕ್ಕೆ ಸಹಾಯಮಾಡಿ ಪ್ರಯೋಜಕನಾದ ಸಂದರ್ಭ ಕತೆಗೆ ಅವಕಾಶ ಮಾಡಿ ಕೊಟ್ಟಿದೆ.

'ಆ ಜೋಟುದ್ದದ ಹುಡುಗ' ಎಂಬುದೂ ಹುಡುಗನ ಪಾತ್ರವನ್ನೇ ಚಿತ್ರಿಸುತ್ತದೆ. ದರಿದ್ರರ ಸಹಾಯಕ ಸಂಘದ ಸ್ವರೂಪ ವ್ಯಕ್ತವಾಗಿ ಬಂದಿದೆ. ಆದರೆ ಹುಡುಗನಿಗೆ ದುರಂತವನ್ನು ತರಲೇಬೇಕಾದ ಕಾರಣ ಕಂಡು ಬರುವುದಿಲ್ಲ. ಕತೆ ಅತಿ ಸಾಧಾರಣವಾದುದು.

'ಗೌರಿಯ ಸಾವು' ನಿಜವಾಗಿ ಕತೆಯೇ ಅಲ್ಲ. ಇಲಿ ಈ ಪ್ರಾಣಿಗಳ ಮೇಲಿನ ಪ್ರೇಮವು ಭಾವಾತಿರೇಕಕ್ಕೆ ಹೋದಂತೆ ಚಿತ್ರಗೊಂಡು ಕತೆಗೆ ಕಳಂಕ ಬಂದಂತಾಗಿದೆ ಆದರೆ ಈ ಕತೆಯಲ್ಲಿರುವ ಒಂದು ಗುಣವನ್ನು ಮರೆಯುವ ಹಾಗಿಲ್ಲ. 'ಗೌರಿ'ಯೆನ್ನುವುದು ಒಂದು ಪ್ರಾಣಿಯೆನ್ನುವುದು ಗೊತ್ತಾಗುವ ತನಕ• ಅದೊಂದು ವ್ಯಕ್ತಿಯ ಹೆಸರೆಂಬ ಭ್ರಮೆ ಬರುವಂತೆ ಮಾಡಿರುವುದು ಈ ಗುಣ. ಇದು ಬರೆವಣಿಗೆಯಲ್ಲಿ ನಿಜವಾಗಿಯೂ ಮೆಚ್ಚತಕ್ಕದ್ದು.

ಶ್ರೀ ಎಂ. ವಿ. ಸೀ. ಅವರ ಕತೆಗಳಲ್ಲಿ ಪ್ರಥಮ ಪುರುಷದಲ್ಲಿ ಮೊದಲಾಗುವ ಕತೆಗಳೇ ಹೆಚ್ಚು. ಇವುಗಳಲ್ಲೆಲ್ಲಾ ಹೇಗೋ ಅನಿರೀಕ್ಷಿತವಾಗಿ ಕತೆಗಾರರ ಆತ್ಮ ಚರಿತ್ರೆಯೂ ಚಿತ್ರಗೊಂಡಿದೆ. ಸೂಕ್ಷ್ಮವಾಗಿ ಪರಿಶೀಲಿಸಿದರೆ 'ನೂರನಲವತ್ತೆರಡರಲ್ಲಿ' ಬರುವ 'ನಾನು' ಎಂಬುವವರ ವಿವರಣೆ, ಸುಂದರ ಪರಿವರ್ತನದ 'ರಾಮು'ವಿನ ಚಿತ್ರ, ತಂತಿಕಿತ್ತ ಪಿಟೀಲಿನ 'ನಾನು'ವಿನ ಸಂಗೀತ ಪ್ರೇಮ, ಜೋಟುದ್ದದ ಹುಡುಗನದಲ್ಲ ಬರುವ 'ನಾನು'—ಇವುಗಳೆಲ್ಲ ಒಟ್ಟು ಸೇರಿದರೆ

ಕತೆಗಾರರ ಒಂದು ಸ್ಥೂಲಚಿತ್ರ ನಮಗೆ ಬರುತ್ತದೆ. ಬಹುಶಃ ಈ ಚಿತ್ರವನ್ನು ಕೊಡಬೇಕೆನ್ನುವುದು ಕತೆಗಾರರ ಆಶಯವಲ್ಲ. 'ನಾನು' ಎಂದು ಮೊದಲು ಮಾಡುವುದರಲ್ಲಿ ಕೆಲವು ಅನುಕೂಲಗಳಿವೆ. ಇವನ್ನೆಲ್ಲಾ ಶ್ರೀ ಎಂ. ವಿ. ಸೀ. ಅವರು ಸರಿಯಾಗಿ ಉಪಯೋಗಿಸಿಕೊಂಡಿದ್ದಾರೆ.

'ಬಿಸಿಲು-ಬೆಳುದಿಂಗಳ'ನಲ್ಲಿ ಈ ಕತೆಗಾರರ ಮೋಹಕವಾದ ಆದರೂ ಸರಳವಾದ ಶೈಲಿ, ವ್ಯಕ್ತಿ ಚಿತ್ರಣದ ಸೂಕ್ಷ್ಮತೆ, ಹೃದಯಸ್ಪರ್ಶಿಯಾದ ಕಲ್ಪನೆ, ನೂತನ ಘಟನಾ ನಿರ್ಮಾಣ ಕೌಶಲಗಳು ಲೇಖಕರಿಗೆ ಮೇಲ್ಪಂಕ್ತಿಯಾಗತಕ್ಕವು.

## 'ಬಿಸಿಲು-ಬೆಳುದಿಂಗಳು' ಸಂಕಲನದ ಕತೆಗಳಲ್ಲಿ ಬರುವ ಸ್ತ್ರೀಪಾತ್ರಗಳು

ಕಲೆಗಾರನ ದೃಷ್ಟಿಯು ಎಷ್ಟು ದೂರವ್ಯಾಪಕವಾಗಿದೆ, ಆದರ ಇಂಗಿತಜ್ಞತೆ ಎಷ್ಟು ಗಾಢವಾಗಿದೆ, ಅದರಲ್ಲಿ ಎಷ್ಟು ಹೃದಯದ ಮರುಕ ಹೊರಹೊಮ್ಮಿದೆ ಮುಂತಾದ ವಿಷಯಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ನಾವು ಅವನ ಕುಂಚ ದಿಂದ ನಿರ್ಮಿತರಾದ ವಿವಿಧ ಪಾತ್ರಗಳ ಕಡೆ ನೋಡಬೇಕು. ಆ ಪಾತ್ರಗಳ ವೈವಿಧ್ಯ ಹೆಚ್ಚಿದಷ್ಟೂ ಅವುಗಳ ಪರಸ್ಪರ ವಿರುದ್ಧ ಸ್ವರೂಪ ಮೂರ್ತಿಮತ್ತಾಗಿ ಚಿತ್ರಿತವಾದಷ್ಟೂ ಅವುಗಳನ್ನು ನಿರ್ಮಿಸಿದ ಕಲೆ ಉತ್ತಮವಾದುದೆಂದು ನಾವು ಸುಲಭವಾಗಿ ಪರಿಗಣಿಸಬಹುದು.

ಈ ದೃಷ್ಟಿಯಿಂದ ಈ ಸಂಕಲನದಲ್ಲಿ ಬರುವ ಸ್ತ್ರೀ ಪಾತ್ರಗಳನ್ನು ವಿಮರ್ಶಿಸ ಬಹುದು. ಈ ದೃಷ್ಟಿಯಿಂದಲೂ 'ದೃಷ್ಟಿಲಾಭ'ದ ಸ್ತ್ರೀಯರೇ ಕಣ್ಮುಂದೆ ಕಟ್ಟಿ ದಂತೆ ನಿಲ್ಲುತ್ತಾರೆ. ಶಾರದಮ್ಮನ ಪತಿಪ್ರೇಮವು ಈ ಕತೆಯಲ್ಲಿ ನಿಚ್ಚಳವಾಗಿ ನಿರ್ಮಿತವಾಗಿದೆ. ಅವಳಿಗಿರುವಷ್ಟು ಚಿತ್ತಶುದ್ಧಿ, ಕಾರ್ಯಶ್ರದ್ಧೆಗಳು ಶಿವರಾಮಯ್ಯನಿಗೇ ಇಲ್ಲ. ಅವನಿಗೆ ಸಂಗೀತ ಬಂದರೇನು? ಅದನ್ನು ರೂಢಿಸಿ ಕೊಂಡು ಕಣ್ಣುಬಂದ ಜೀವನವನ್ನು ಬೆಳಕಾಗಿಸುವ ಬುದ್ಧಿ ಅವನಿಗಿಲ್ಲ. ಶಾರದಮ್ಮ ಸಹನೆಯ ಮೂರ್ತಿ. ವೈರಾಗಿಯ ಮೂಲಿಕೆಯ ಸಹಾಯದಿಂದ ಗಂಡನಿಗೆ ಕಣ್ಣು ಬಂದದ್ದು ಶಾರದಮ್ಮನಿಗೆ "ಅದೃಷ್ಟವೋ ದುರದೃಷ್ಟವೋ ಹೇಳಲು ಸಾಧ್ಯವಿಲ್ಲ" ಎನ್ನುತ್ತಾರೆ ಕತೆಗಾರರು. ನ್ಯಾಯವಾಗಿ ನೋಡಿದರೆ ಇದು ಎರಡೂ ನಿಜ. ಅದು ಮೊದಮೊದಲು ದುರದೃಷ್ಟದಂತೆ ಕಂಡುಬಂದರೂ ಕ್ರಮೇಣ ಕಣ್ಣಿಗೆ ಕುರುಡು ಮುಸುಕಿ, ಮನಸ್ಸಿಗೆ ಮುಸುಕಿದ್ದ ಮಾಯೆಯನ್ನು ತೆರೆಯಿತು. ಒಂದು ಕುರುಡು ಇನ್ನೊಂದು ಕುರುಡನ್ನು ನಾಶಮಾಡಿದ ಈ ಕತೆಯಲ್ಲಿ

ಶಾರದಮ್ಮನ ಅನುಭವ ಬಹಳ ಗಾಢವಾಗಿ ಚಿತ್ರಿತವಾಗಿದೆ. ಅವಳು "ದೇವರೇ, ಅವರಿಗೆ ಕಣ್ಣು ಕೊಟ್ಟೆ, ಒಳ್ಳೆಯ ಬುದ್ಧಿಯನ್ನೂ ಕೊಡು" ಎಂದು ಪ್ರಾರ್ಥನೆ ಮಾಡುವುದರಲ್ಲಿ ಅವಳ ಅಂತರಂಗದ ಕ್ಷೋಭೆ ವ್ಯಕ್ತವಾಗುತ್ತದೆ. ಕನಸಿನಲ್ಲಿ ಅದೇ ಬೈರಾಗಿಯನ್ನು ಕಂಡರೆ ಆತನು ಇಲ್ಲದ ವಸ್ತುವಿಗೆ ಅತ್ಯಾಶೆಪಟ್ಟರೆ ಒಂದು ಹೋಗಿ ಇನ್ನೊಂದಾಗುತ್ತದೆ" ಎನ್ನುತ್ತಾನೆ. ಶಂಕರ ಹೆಣ್ಣನ್ನು ಒಪ್ಪಬೇಕಾದಾಗ ಶಾರದಮ್ಮನು "ಯಾರ ಕಣ್ಣಿಗೆ ಹೇಗೆ ಕಂಡರೇನು, ಶಂಕರಾ? ಮುಖ್ಯವಾಗಿ ಮನಸ್ಸೊಪ್ಪಬೇಕು" ಎನ್ನುತ್ತಾಳೆ. ಇದರಲ್ಲಿ 'ಕಣ್ಣಿಗೆ' ಎನ್ನುವ ಪದದ ಮೇಲೆ ಅವಧಾರಣೆಯಿಟ್ಟು ಓದಿದರೆ ಕತೆಯ ದೃಷ್ಟಿ ಗೋಚರವಾಗುತ್ತದೆ.

ಶಾರದೆಯ ಜೀವನಕ್ಕೆ ಸಂಕಟವನ್ನು ತಂದವನು ಶಿವರಾಮಯ್ಯನು. ಆದರೂ ಅವನನ್ನು ಆಕರ್ಷಿಸಿದ ಭಾಗ್ಯಮ್ಮ–ಲಲಿತೆ ಇವರಿಬ್ಬರಿಗೂ ಅದರ ಭಾಗ ಸ್ವಲ್ಪ ಸಲ್ಲಬೇಕು. ವೇಶ್ಯೆಯಾದ ಭಾಗ್ಯಮ್ಮ ತನ್ನ ಬಲೆಯಲ್ಲಿ ಶಿವರಾಮಯ್ಯನನ್ನು ಹಾಕಿಕೊಂಡ ಸಂವಾದ ಚಿಕ್ಕದಾದರೂ ಭಾಗ್ಯಮ್ಮನ ಚಿತ್ರವನ್ನು ಸಂಪೂರ್ಣವಾಗಿ ಕೊಡುತ್ತದೆ. ಬಹಳ ಪ್ರೌಢೆಯಾದ ಅವಳು ಈ ವಿಚಾರದಲ್ಲಿ ಇನ್ನೂ ಕಲಿಯ ಬೇಕಾದ ಶಿವರಾಮಯ್ಯನಿಗೆ ಮೋಸಮಾಡುವುದು ಕಷ್ಟವಾಗಲಿಲ್ಲ. ಈ ಸಮಯ ದಲ್ಲಿಯೇ ಶಾರದಮ್ಮನು ಹೇಳಿದ ಒಳ್ಳೆಯ ಮಾತಿಗೆ ಕೋಪಗೊಂಡು ಶಿವರಾಮಯ್ಯನು "ಕಣ್ಣು ಹೋದರೆ ಹೋಗಲಿ, ಕಣ್ಣು ಮತ್ತೆ ಹೋದರೆ ಮನೆ ಯಲ್ಲಿಯೇ ಕುಳಿತುಕೊಳ್ಳುತ್ತೇನೆ. ಆಗ ನೀನು ಸುಖವಾಗಿರಬಹುದು" ಎಂದು ಕಠಿಣವಾಗಿ ನುಡಿಯುತ್ತಾನೆ. ಈ ಭವಿಷ್ಯವು ಸತ್ಯವಾಗಿಬಿಡುತ್ತದೆಯೆಂದು ಅವನಿಗೇನು ಗೊತ್ತು, ಪಾಪ. ಶಾರದೆಗೆ ನಿಜವಾಗಿಯೂ ಅವನು ಮನೆಯಲ್ಲಿ ಕೂರುವುದು ಬೇಕಿಲ್ಲ. ಆದರೆ ಅದಾಗದೆ ಅವಳ ಸುಖ ಹಿಂದಿರುಗುವ ಹಾಗಿರಲಿಲ್ಲ. ಶಿವರಾಮಯ್ಯನ ಕತೆಯನ್ನು ಬೆಳೆಸುವ ಈ ಎರಡು ಸ್ತ್ರೀ ವ್ಯಕ್ತಿಗಳು ಈ ಕತೆಯಲ್ಲಿ ಚೆನ್ನಾಗಿ ಬಂದಿವೆ.

'ನೀಲಿಯ ಕವರಿ'ನ ಇಂದಿರೆ ಎಲ್ಲ ಮನೆಗಳ ನವದಾಂಪತ್ಯದ ಇಂದಿರೆಯೇ! ಅವಳ ಚಿತ್ರಣದಲ್ಲಿ ಯಾವ ಹೊಸತನವೂ ಇಲ್ಲ. ಪತಿ ಪ್ರೇಮ, ಕೋಪ, ಕಣ್ಣೀರು, ಒಳಗಾಗಿರುವ ಸಣ್ಣ ಚಿತ್ರ ಅವಳದು. ಕತೆ ಕೇವಲ ಘಟನಾಪ್ರಧಾನ ವಾಗಿರುವುದರಿಂದ ಪಾತ್ರ ಚಿತ್ರಣಕ್ಕೆ ಇಲ್ಲಿ ಹೆಚ್ಚು ಅವಕಾಶವಿಲ್ಲ.

'ನಿಷ್ಪ್ರಯೋಜಕ'ನ ತಾಯಿ ಕಾವೇರಮ್ಮ, ತಂಗಿ ಸಾವಿತ್ರಿ, ಇವರಿಬ್ಬರೂ

ನಿರಾಧಾರರಾಗಿದ್ದಾಗ ಕಾರ್ಖಾನೆ ಸೇರಿ ಅವರ ಜೀವನಕ್ಕೂ ತಂಗಿಯ ಮದುವೆಗೂ ಸಹಾಯ ಮಾಡಿದ ಕತೆಯಲ್ಲಿ ಈ ತಾಯಿಮಕ್ಕಳಿಬ್ಬರೂ ದೇಶದ ಸ್ವಾತಂತ್ರ್ಯಕ್ಕೆ ಬಲಿಯಾದ ಸೀನಪ್ಪನಿಗಾಗಿ ಕಣ್ಣೀರಿಡುವುದನ್ನು ಕಾಣುತ್ತೇವೆ. ಸೀನಪ್ಪನ ಪಾತ್ರಕ್ಕೆ ಇವರಿಬ್ಬರೂ ಹಿನ್ನೆಲೆಯಾಗಿ ಇಲ್ಲಿ ರೂಪುಗೊಂಡಿದ್ದಾರೆ. ಅವರ ಕಣ್ಣೀರಿನಲ್ಲಿ ಸೀನಪ್ಪನು 'ನಿಷ್ಪ್ರಯೋಜಕನಲ್ಲ' ಎಂಬುದು ಸ್ಥಾಪಿತವಾಗುತ್ತದೆ.

ಬದುಕಿರದಿದ್ದರೂ, ಸಂಗೀತಗಾರನಾದ ರಾಮಚಂದ್ರನ ಮಾತಿನಲ್ಲಿ ಮಾತ್ರ ಹೊರಹೊಮ್ಮಿದರೂ, ತಂತಿಕಿತ್ತ ಪಿಟೀಲಿಗೆ ನಾದ ಮಾಧುರ್ಯವನ್ನೂ ತೀವ್ರವಾದ ಯಾತನೆಯ ಅನುಭವವನ್ನೂ ತರುವ "ಲಲಿತೆ" ಒಂದು ಕನಸಿನಂತೆ ಬಂದು ಹೋಗುತ್ತಾಳೆ. ಅವಳ ರೂಪದ ವರ್ಣನೆಯಾಗಲಿ, ಇತರ ಕಾರ್ಯ ಚಟುವಟಿಕೆಗಳ ವರ್ಣನೆಯಾಗಲಿ ನಮಗೆ ಸಿಕ್ಕುವುದಿಲ್ಲ. ಆದರೂ ಸಂಗೀತಗಾರನ ಮಾತಿನಿಂದ ಜೀವನದಲ್ಲಿ ಅಂತಹ ಪರಿಣಾಮವನ್ನು ಮಾಡಿದ ಲಲಿತೆಯನ್ನು ನೋಡಬೇಕೆಂದು ಮನಸ್ಸು ತವಕಪಡುತ್ತದೆ. ಆದರೆ ಅವಳೊಂದು ಒಗಟು "ಲಲಿತ ನನಗೆ ಬಹುಪ್ರಿಯವಾದ ರಾಗ.. ಆದರೂ ಅದನ್ನು ಹೆಚ್ಚು ನುಡಿಸಲಾರೆ. ಲಲಿತ ನನ್ನ ಬಳಿ ಹೆಚ್ಚು ಹೊತ್ತು ನಿಲ್ಲುವುದಿಲ್ಲ ಸ್ವಾಮಿ. ಓಡಿಹೋಗಿಬಿಡುತ್ತಾಳೆ. ....ಎಂದೋ ಹೋದವಳು. ಕರೆದಾಗ ಬರುತ್ತಾಳೆ. ಆದರೆ ಹೆಚ್ಚು ಹೊತ್ತು ನಿಲ್ಲುವುದಿಲ್ಲ. ಓಡಿ ಹೋಗಿಬಿಡುತ್ತಾಳೆ....ಚಂಚಲೆ....ಚಂಚಲೆ...." ಎಂದು ಗಹಗಹಿಸಿ ನಕ್ಕು ನಿಟ್ಟುಸಿರಿಡುವುದರಲ್ಲಿ ಮಾತ್ರ ಅವಳ ಚಿತ್ರ ನಮಗೆ ದೊರಕಬೇಕು. "ನನ್ನ ಕಥೆಯೆಲ್ಲ ಇದರಲ್ಲಿ ಅಡಗಿದೆ; ಸ್ವಾಮಿ, ಕೇಳಿ. ನೀವೂ ಬೇಕಾದರೆ ಅಳಿ" ಎನ್ನುವುದರಲ್ಲಿ ಆ ಚಿತ್ರ ಮತ್ತಷ್ಟು ಅಸ್ಪಷ್ಟವಾಗಬೇಕು ಅಷ್ಟೆ. ಅವನ ಎದೆ ಕರಗಿಸುವ ಗಾನದಲ್ಲಿ, ಒಳಗನ್ನೆಲ್ಲಾ ಹಿಂಡಿಬಿಡುವ ಗಾನದಲ್ಲಿ, ಸಂಗೀತದಲ್ಲಿ ಅಳುವುದನ್ನು ಸಾಧಿಸಿದ್ದ ಅವನ ಗಾನದಲ್ಲಿ, ಲಲಿತೆ ಮಸಕುಮಸಕಾಗಿ ಕಂಡಹಾಗೆ ಆಗುತ್ತಾಳೆ. ಚೆನ್ನಾಗಿ ಕಾಣದಿದ್ದರೂ ಮನಸ್ಸಿನ ಕಣ್ಮುಂದೆ ಕಟ್ಟುವ ಅವಳ ಚಿತ್ರದಲ್ಲಿ ಏನೋ ಒಂದು ಸಮ್ಮೋಹನ ಶಕ್ತಿ ಅಡಗಿಲ್ಲವೆ! ಅನರ್ಥಗಳಿಂದ ತುಂಬಿದ ಬಾಳಿನ ಪರಿಣಾಮವಾಗಿ ಅರ್ಥವತ್ತಾದ ಮಾತುಗಳನ್ನಾಡುವ ರಾಮಚಂದ್ರನ ನುಡಿಯೆಂಬ ಕುಂಚ ಬಿಡಿಸುವ ರೇಖಾಚಿತ್ರ ಈ ಲಲಿತೆ.

ಚೋಟುದ್ದದ ಹುಡುಗ ಸಂಪಾದಿಸಿದ ಕೂಲಿಯನ್ನು ತೆಗೆದುಕೊಂಡು ಅವನಿಗೆ ಅನ್ನಹಾಕುತ್ತಿದ್ದ ಮುದುಕಿ, 'ಗೌರಿ'ಯ ಮನೆಯ ತಾಯಿತಂಗಿಯರು ಹೆಸರಿನಿಂದ ಮಾತ್ರ ನಮಗೆ ಪರಿಚಯ.

ಆನಾ, ಐರೀನಳಿಗಿಂತ ಹೆಚ್ಚಾಗಿ ನಮ್ಮ ಮೆಚ್ಚುಗೆಯನ್ನು ಪಡೆಯುತ್ತಾಳೆ. ಐರೀನಳು ಯಾವ ಗೋಜಿಗೂ ಹೋಗದ ಯಾವ ವಿಶೇಷ ಪರಿಣಾಮವನ್ನೂ ಇತರರ ಮೇಲೆ ಉಂಟುಮಾಡದ ಸಾಧಾರಣ ಸ್ತ್ರೀ. ಆನಾ ಹಾಗಲ್ಲ. ತನ್ನ ಗಾಢವಾದ ಪ್ರೇಮವನ್ನು ಬೆಳೆಸಿಕೊಂಡು ಬಂದಿದ್ದವಳು. ಸುಂದರಿ, ಚೆನ್ನಾಗಿ ಮಾತಾಡಬಲ್ಲವಳು. ತನ್ನ ಸ್ಥಾನವನ್ನು ಆಕ್ರಮಿಸಿದ ಐರೀನಳೊಡನೆ ಸ್ನೇಹ ದಿಂದಲೇ ಇರಬಲ್ಲವಳು. ಗೂಗ್ಲಿಲ್ಮೋ ತನ್ನೊಡನೆ ಮಾತನಾಡುವಾಗಲೂ ತನ್ನ ಮನಸ್ಸಿನ ಸಂಪೂರ್ಣ ಆಸೆಯನ್ನು ಬಿಟ್ಟುಕೊಡದವಳು ಇವಳು. ಪ್ರಯಾಣದಲ್ಲಿ, ಇತರ ಅನೇಕ ಹವ್ಯಾಸಗಳಲ್ಲಿ ತನ್ನ ಕಾಲವನ್ನು ಕಳೆದು ಮದುವೆಯಾಗದೆ ನಿಂತಿದ್ದವಳು ಇವಳು. ಇವಳ ನಡವಳಿಯಲ್ಲಿ ನಮಗೆ ಮೆಚ್ಚಿಗೆಯುಂಟಾದರೂ ಮನಸ್ಸಿನಲ್ಲಿ ಶಾಶ್ವತವಾಗಿ ನಿಲ್ಲುವ ಪಾತ್ರವನ್ನು ಅವಳು ಪಡೆದಿಲ್ಲ; ಕಾರಣ ಕತೆಗಾರನ ಉದ್ದೇಶವೇ ಅದಲ್ಲ.

ಹುಚ್ಚಿಯಾದ ಯಮುನಮ್ಮನ ಚಿತ್ರ ಇನಕ್ಕಿಂತ ಹೆಚ್ಚು ಬಿಡಿಯಾಗಿ ರೂಪುಗೊಂಡಿದೆ. ಅವಳು ವಿಧವೆ ಆದಾಗಿನಿಂದ, ವೆಂಕಟಪತಿಯೊಡನೆ ಸಂಪರ್ಕ ಹೊಂದಿದ್ದು, ಆಸ್ಪತ್ರೆಯಲ್ಲಿ ಚಿಕಿತ್ಸೆ ಹೊಂದಿ ಹುಚ್ಚಿಯಾದುದು ಇವೆಲ್ಲ ನಮಗೆ ತಿಳಿದುಬರುತ್ತದೆ. ಇಪ್ಪತ್ತು ವರುಷಗಳ ಅವಳ ಹುಚ್ಚು ಜೀವನ, ಹುಚ್ಚಿನ ಅಮಲಿನಲ್ಲಿಯೇ ಅವಳು ಬೆಳೆಸಿಕೊಂಡು ಬಂದಿದ್ದ ಅವಳ ಮಗನ ಚಿತ್ರ ಇವು ಈ ಕತೆಗೆ ಪ್ರಾಧಾನ್ಯವನ್ನು ಕೊಡುತ್ತವೆ. ಹುಚ್ಚು ವಾಸಿಯಾಗಿ ಇವಳು ಸಾಧಾರಣವಾದ ಜೀವನವನ್ನು ನಡೆಸಲು ಮೊದಲುಮಾಡಿದ ಮೇಲೆ ನಮಗೆ ಯಾವ ವ್ಯತ್ಯಾಸವೂ ಇಲ್ಲಿ ಚಿತ್ರಿತವಾಗಿಲ್ಲ. ಆದರೆ ಸಾಯುವುದಕ್ಕೆ ಮುಂಚೆ ಅವಳು ಕೇಳಿದ "ರಾಮು ನಿಜವಾಗಿ ನನ್ನ ಮಗನೆ?" ಎಂಬ ಪ್ರಶ್ನೆಯಲ್ಲಿ ಅವಳ ಅಂತರಂಗದಲ್ಲಿ ಉದ್ಧಕ್ಕೂ ನಡೆದಿದ್ದ ತುಮುಲ ರೂಪುಗೊಳ್ಳುತ್ತದೆ.

ಸುಂದರಳಾಗಿ ಪರಿವರ್ತನೆಗೊಂಡ ಲಕ್ಷ್ಮಮ್ಮನ ಪಾತ್ರವೂ ಇಲ್ಲ ಸುಸ್ಪಷ್ಟ ವಾಗಿ ಮೂಡಿದೆ. ಅವಳ ಹದಿನೆಂಟು ವರ್ಷಗಳ ಜೀವನದ ಚಿತ್ರಣದಲ್ಲಿ ಅನೇಕ ಘಟನೆಗಳು ನಡೆದು ಹೋಗುತ್ತವೆ. ವಿಧವೆಯಾದ ಅವಳು 'ಮಡಿ'ಯಾದುದು, ನಾರಾಯಣರಾಯರ ಸಂಸಾರದಲ್ಲಿ, ಅಣ್ಣನ ಸಂಸಾರದಲ್ಲಿ ಕೆಲಸ ಮಾಡುವವ ಳಾಗಿದ್ದುದು, ಸ್ಕೂಲುಮಿಸ್ಟ್ರೆಸ್ ಜೊತೆಯಲ್ಲಿ ಅನೇಕ ರಾತ್ರಿಗಳನ್ನು ಕಳೆದುದು, ಅಲ್ಲಿಯೇ ಒಬ್ಬ ಸಾಹುಕಾರನ ಸಂಪರ್ಕವನ್ನು ಸಂಪಾದನೆ ಮಾಡಿದ್ದು, ಕೂದಲು ಬೆಳೆಸಿದ್ದು, ಸರಳೆಯನ್ನು ಹೆತ್ತು ಅವಳನ್ನು ದೊಡ್ಡವಳಾಗಿ ಮಾಡಿದ್ದು ಇವೆಲ್ಲ ಈ

ಕತೆಯ ಬೇರೆ ಬೇರೆ ಮೆಟ್ಟಲುಗಳು. ಲಕ್ಷ್ಮಮ್ಮನ ಕೂದಲು ಬೆಳೆದಂತೆಲ್ಲಾ ಈ ಚಿತ್ರವೂ ಬೆಳೆಯುತ್ತಾ ಹೋಗುತ್ತದೆ. ಇದರ ಪ್ರಾರಂಭವಾದ ಕತೆಗಾರನ "ಹೀಗಿದ್ದಿದ್ದರೆ?" ಎಂಬ ಚಿತ್ರ, ಅದರಿಂದ ಅವಳು ಅನುಭವಿಸಿದ ಮೂಕ ಯಾತನೆ ಇವುಗಳು ನಮ್ಮನ್ನು ಅವಳ ವಿಚಾರದಲ್ಲಿ ಅನುಕಂಪಿಸುವಂತೆ ಮಾಡುತ್ತವೆ. ಸರಳೆ ಲಕ್ಷ್ಮಮ್ಮನ ಹಿಂದಿನ ಚಿತ್ರದಂತಿದ್ದಳೆನ್ನುವ ಮಾತಿನಲ್ಲಿ ಇವರಿಬ್ಬರ ಸೌಂದರ್ಯವೂ ಸೂಚಿತವಾಗಿದೆ. ವಿಧವೆಯರ ಜೀವನದಲ್ಲಿ ಅನುಕಂಪವನ್ನು ಸೂಚಿಸುವ ಈ ಚಿತ್ರದಲ್ಲಿ ಮತ್ತಾವ ವೈಶಿಷ್ಟ್ಯವೂ ಇಲ್ಲ.

ಕರಿಯನ ಗೌರಿ ಅವನ ಮೋಡಗಳಂತೆಯೇ ಗಾಳಿಯಲ್ಲಿ ತೇಲಿಹೋಗುವ ಒಂದು ಬಿಳಿಮೋಡ.

ಈ ಸ್ತ್ರೀ ಪಾತ್ರಗಳಲ್ಲಿ ಸಾಕಷ್ಟು ವೈವಿಧ್ಯವಿದೆಯೆಂದೂ ಅವುಗಳ ಚಿತ್ರಣದಲ್ಲಿ ಕತೆಗಾರರ ಕೌಶಲ ವ್ಯಕ್ತವಾಗುತ್ತದೆಂದೂ ಮತ್ತೆ ಹೇಳಬೇಕಾಗಿಲ್ಲ.

---

